# ಹಿಂಗಾರ

ಅರೆಭಾಷೆ ತ್ರೈಮಾಸಿಕ

ಕರ್ನಾಟಕ ಸರ್ಕಾರ

ಸಂಪುಟ-3 ಸಂಚಿಕೆ-11 ದಿನಾಂಕ : 30.09.2019 ಕೊಡಗು ರೂ. 20/-

ಜುಲೈ-ಆಗಸ್ಟ್-ಸೆಪ್ಟೆಂಬರ್

2019



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



# ಹಿಂಗಾರ

ಜುಲೈ-ಆಗಸ್ಟ್-ಸೆಪ್ಟೆಂಬರ್-2019

**"HINGARA"** A quarterly on Arebashe Language, Litereature and Culture, Published by 'Karnataka Arebashe Samskruthi Mathu Sahithya Academy' Madikeri - 571201

ಪ್ರಕಟಣೆ : ಜುಲೈ–ಆಗಸ್ಟ್–ಸೆಪ್ಟಂಬರ್–2019

ಪುಟಗಳು : 80

ಬೆಲೆ : ರೂ. 20/–



ಪ್ರಕಟಣೆ :

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**

'ಕಾಫಿ ಕೃಪಾ' ಕಟ್ಟಡ, 1ನೇ ಮಹಡಿ, ರಾಜಾಸೀಟ್ ರಸ್ತೆ,

ಮಡಿಕೇರಿ, ಕೊಡಗು ಜಿಲ್ಲೆ.

ಪುಸ್ತಕ ಸಿಗುವ ಸ್ಥಳ :

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**

'ಕಾಫಿ ಕೃಪಾ' ಕಟ್ಟಡ, 1ನೇ ಮಹಡಿ, ರಾಜಾಸೀಟ್ ರಸ್ತೆ,

ಮಡಿಕೇರಿ, ಕೊಡಗು ಜಿಲ್ಲೆ.

ದೂರವಾಣಿ ಸಂಖ್ಯೆ : 08272–223055

ಮುದ್ರಕರು:

**ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,**

ಪೂಜಾ ಆರ್ಕೇಡ್,

ಜೂನಿಯರ್ ಕಾಲೇಜ್ ರಸ್ತೆ, ಮಡಿಕೇರಿ.

Ph. 08272-224919, 9448135592

# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ಪ್ರಧಾನ ಸಂಪಾದಕರ್

**ಲಕ್ಷ್ಮೀ ನಾರಾಯಣ ಕಜೆಗದ್ದೆ**

ಸಂಪಾದಕರ್

**ಬಾರಿಯಂಡ ಜೋಯಪ್ಪ**

ಪ್ರಕಾಶಕರ್

**ಚಿನ್ನಸ್ವಾಮಿ**

# ಅಧ್ಯಕ್ಷರ ನುಡಿ



## ಎಲ್ಲವುಕೂ ನಮಸ್ಕಾರ

ಕರ್ನಾಕಟ ಅರೆಭಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ 2019ರ್‌ಲಿ ನೂತನವಾಗಿ ಆಯ್ಕೆಯಾದ ನಮ್ಮ ತಂಡಕ್ಕೆ ಅನೇಕ ಸವಾಲುಗ ಇದ್ದೊ. ಸದಸ್ಯರುಗಳ ಕೊರತೆ ಹಂಗೇನೆ ರಿಜಿಸ್ಟ್ರಾರ್ ನೇಮಕಕ್ಕೆ ವಿಳಂಬವಾದರೂ ಕಮ್ಮಿ ಅವಧಿಲಿ ಸಾಕಷ್ಟು ಯೋಜನೆಗಳನ್ನ ಹಮ್ಮಿಕಂಡ್ ಅದನ್ನ ಈಗಾಗಲೇ ಕಾರ್ಯಗತ ಮಾಡುವಲ್ಲಿ ಹೆಜ್ಜೆ ಹಾಕುತ್ತೊಳೊ. ನಮ್ಮ ಯುವಜನಾಂಗ ನಮ್ಮ ಪರಂಪರೆಯ ವಾರಸುದಾರರ್ ತೇಳುವಂತದ್ದು ನಮ್ಮ ಬಲವಾದ ನಂಬಿಕೆ. ಆ ಕಾರಣಕ್ಕೆ ಮಕ್ಕಳನ್ನ ಮುಖ್ಯ ಕೇಂದ್ರವಾಗಿ ಇಟ್ಕಂಡ್ ಈಗಾಲೇ ಅರೆಭಾಷಿಗರು ಹೆಚ್ಚಿರುವಂತಹ ದ.ಕ. ಕಡಬ ತಾಲೂಕಿನ ಸುಬ್ರಹ್ಮಣ್ಯ ಕಾಲೇಜೀಲಿ, ಕಾಲೇಜು ಮಕ್ಕಳಿಗಾಗಿ ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿಯ ಸಂಘನ ಕೂಡ ಸ್ಥಾಪನೆ ಮಾಡಿಯೊಳೊ. ಆ ಸಂಘದ ಮೂಲಕ ಮಕ್ಕಳಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯದ ಕಾರ್ಯ ಚಟುವಟಿಕೆಗ ನಡೆದದೆ ಅನ್ನೋ ಭರವಸೆ ನಮ್ಮದ್. ನಮ್ಮ ಭಾಷೆ ಮತ್ತೆ ಸಂಸ್ಕೃತಿಯ ವಿಸ್ತರಣೆಗೆ ನಾಟಕ ಒಂದ್ ಪರಿಣಾಮಕಾರಿ ಮಾಧ್ಯಮ. ಈ ಉದ್ದೇಶಕ್ಕಾಗಿ ಈಗಾಗಲೇ ಸುಳ್ಯದ ರಂಗಮನೆಲಿ ರಂಗಕರ್ಮಿ ಜೀವನ್ ರಾಂ ಅವರ ನೇತೃತ್ವಲಿ ರಾಜ್ಯದ ಬೇರೆ ಬೇರೆ ಕಡೆಗಳ್‌ಂದ ಬಂದಿರುವಂತ ಮಕ್ಕಳಿಗಾಗಿ ರಂಗತರಬೇತಿ ಕಾರ್ಯಾಗಾರ ನಡೀತಾ ಉಟ್ಟು. ಇಂತಹ ವಿಭಿನ್ನ ರೀತಿಯ ಯೋಜನೆನ ಕೊಡಗಿನ ಕಡೆಗೂ ಕೂಡ ತರುವ ಆಲೋಚನೆ ನಮ್ಮದು. ಇದರ ಜೊತೆಗೆ ನಮ್ಮ ಸಂಸ್ಕೃತಿಯ ಹಬ್ಬಗಳ ನೆಂಪು ಮಾಡಿಕಂಡ್ ಆಚರಿಸೋಕು ಅಂತ ಈಗಾಲೇ ಮಡಿಕೇರಿಯ ಅವಂದೂರ್‌ಲಿ ಕಿಡ್ವಾಸ ಹಬ್ಬದೊಟ್ಟಿಗೆ ಅರೆಭಾಷೆ ಸಾಂಸ್ಕೃತಿಕ ಕಾರ್ಯಕ್ರಮ ಕೂಡ ಹಮ್ಮಿಕೊಂಡಿದ್ದೋ. ಕೊಡಗಿನ ಚೆಂಬು ಗ್ರಾಮಲಿ ಕೂಡ ಕಿಡ್ವಾಸದ ಆಚರಣೆನೊಟ್ಟಿಗೆ ಅರೆಭಾಷಿಗರ ಹುಟ್ಟು ಸಾವಿನ ನಡುಲಿ ಬರುವ ವಿಧಿ ವಿಧಾನಗಳ ಕುರಿತಂತ ಕತೆ ಮತ್ತು ಪ್ರದರ್ಶನ ಕೂಡ ನಡ್ದುಟು. ಅದರೊಟ್ಟಿಗೆ ಕೊಡಗಿನ ಆಲೂರು ಸಿದ್ಧಾಪುರಲಿ ಅರೆಭಾಷೆಯ ಬಹುಮುಖ್ಯ ಕವಿಗಳಾದಂತಹ ಶ್ರೀಯುತ ಭವಾನಿ ಶಂಕರ ಹೊದ್ದೆಟ್ಟಿ ಇವರ ಸಾರಥ್ಯಲಿ ಅರೆಭಾಷೆ ಸಾಹಿತ್ಯ ಸಮ್ಮೇಳನ ಹಮ್ಮಿಕೊಂಡಳೊ. ಮೂರು ಅರೆಭಾಷೆ ಕೃತಿಗ ಇದೇ ಸಮ್ಮೇಳನಲ್ಲಿ ಬಿಡುಗಡೆಗೊಂಡದೆ. ಮುಂದಿನ ದಿನಗಳಲ್ಲಿ ಇನ್ನಷ್ಟು ಸೃಜನಶೀಲ ಕೃತಿಗಳನ್‌ನ ಹೊರತರುವ ಆಶಯ ನಮ್ಮದ್. ನಮ್ಮದ್ ಕಾರ್ಯ ಚಟುವಟಿಕೆ ಶುರು ಗೊಂಡ 2–3 ತಿಂಗಳ ಒಳಗೆ ನಾವು ಪೂರ್ಣ ಮೌಲಿಕ ಬರಹಗಳಿಗೆ ಆದ್ಯತೆ ಕೊಟ್ಟವೆ. ಚಿತ್ರಕಲೆಯ ಮೂಲಕ ನಮ್ಮ ಸಂಸ್ಕೃತಿಯ ಚಿತ್ರಣ ಕಾಲ ಕಾಲಕೂ ಉಳಿವ ರೀತಿಲಿ ಕಟ್ಟಿಕೊಡುವಂತ ಒಂದು ಪ್ರಯತ್ನ ನಡೀತಾ ಉಟ್ಟು.

ನಮ್ಮದ್ ಶ್ರೀಮಂತ ಭಾಷೆ. ಈ ಭಾಷೆಲಿ ಸಂಗೀತದ ನಾದ ಉಟ್ಟು. ಸಾಹಿತ್ಯದ ಗಂಧ ಉಟ್ಟು. ನಮ್ಮ ಸಂಸ್ಕೃತಿಲಿ ಇಡೀ ಬದುಕಿನ ಸತ್ವ ಅಡಗಿಟು. ಭಾಷೆ, ಸಂಸ್ಕೃತಿಯ ವಿಸ್ತರಣೆ ಮತ್ತೆ ಉಳಿವಿಗೆ ನಮ್ಮೊಟ್ಟಿ ಕೈ ಜೋಡಿಸಿ.

✍ **ಲಕ್ಷ್ಮೀ ನಾರಾಯಣ ಕಜೆಗದ್ದೆ**
ಅಧ್ಯಕ್ಷರ್

# ಸಂಪಾದಕೀಯ



ಸರ್ವ ಓದುಗ ಬಾಂಧವ್‌ಕೆ ನಮಸ್ಕಾರ,

'ಹಿಂಗಾರ'ದ ಹನ್ನೊಂದನೆ ಸಂಚಿಕೆನ ನೀವೆಲ್ಲಾ ಕಾಯ್ತಿದ್ದರಿತ ಗೊತ್ತುಟು. ಹೌದು, ತಡ ಆಗಿ ಕೈ ಸೇರುತ್ತಾ ಉಟ್ಟು. ಸರಕಾರ ಬದಲಾದಂಗೆ ಸಮಿತಿನೂ ಬದಲಾತ್. ಹೊಸ ಸಮಿತಿನ ಸರಕಾರ ರಚನೆ ಮಾಡಕನ ತಡ ಆತ್. ಅದರ್ಲೂ ಸನ ಪೂರ್ಣ ಪ್ರಮಾಣದ ಸಮಿತಿ ಇನ್ನೂ ರಚನೆ ಆತ್ಲೆ. ಇನ್ನೆಂತ ಮಾಡ್ದುತ ಹೊಸ ಸಮಿತಿ ಗ್ಯಾನ ಮಾಡ್ತ್. ಇನ್ನೂ ಹಿಂಗೆ ಕುದ್ದರೆ ಆಕಿಲೆತ ಇದ್ದದರ್ಲೆ ಸುಧಾರಣೆ ಮಾಡ್ನೋತ ಗ್ಯಾನ ಮಾಡ್ದ ಈ ಸಮಿತಿ ಕಾರ್ಯಕ್ರಮ ರೂಪಿಸಿತ್. ಈಗ ಅಲ್ಲಲ್ಲಿ ಕಾರ್ಯಕ್ರಮ ನಡೀತಾ ಉಟ್ಟು. ಈ ಹಿಂದೆನ ಸಮಿತಿಗಳಿಗೆ ನೀವೆಲ್ಲ ಸಲಹೆ ಸಹಕಾರ ಕೊಟ್ಟಂಗೆ ಈಗನ ಸಮಿತಿಗೂ ನಿಮ್ಮೆಲ್ಲರ ಸಲಹೆ ಸಹಕಾರ ಬೇಕ್‌ತ ಕೇಳಿಕಂಡವೆ.

ಪೂರ್ಣ ಪ್ರಮಾಣದ ಸಮಿತಿ ರಚನೆ ಆಗದ ಕಾರಣಂದ ಈ ಹಿಂದೆನ ಸಮಿತಿ ಸದಸ್ಯರಾಗಿದ್ದ್, 'ಹಿಂಗಾರ'ದ ಸಂಪಾದಕತ್ವದ ಜವಾಬ್ದಾರಿ ವಹಿಸಿಕಂಡ್ ಕಾರ್ಯ ನೀಸಿದ ನನ್ನನ ಈ ಸತಿನೂ ಸಂಪಾದಕತ್ವದ ಜವಾಬ್ದಾರಿ ವಹಿಸಿಕಂಬಕೆ ಕೇಳಿಕಂಡೊಳೊ.

ನೀವೆಲ್ಲ ಹಿಂದೆ ಹೆಂಗೆ ಸಹಕಾರ ಕೊಟ್ಟೊಳರಿಯೊ ಹಂಗೆ ಇನ್ನ್ ಮುಂದೆ ಸನ ಬರವಣಿಗೆನ ಕಳ್ಸಿಕೊಟ್ಟ್ ಸಹಕರಿಸಿತ ಕೇಳಿಕಣೆ.

✍ಬಾರಿಯಂಡ ಜೋಯಪ್ಪ.
ಸಂಪಾದಕ

ಪ್ರಕಟ ಆದ ಬರವಣಿಗೆಗೆ ಆಯಾ ಬರಹಗಾರರೆ ಜವಾಬ್ದಾರರ್.

**ಮಾನ್ಯ ಓದುಗರ ಗಮನಕ್ಕೆ**

ಸರಕಾರ ಬದಲಾದಂಗೆ ಅಕಾಡೆಮಿ ಸಮಿತಿನೂ ಬದಲಾವಣೆ ಆತ್. ಹಂಗಾಗಿ 2019 ರ ಜುಲೈ–ಆಗಸ್ಟ್–ಸೆಪ್ಟಂಬರ್ ಮತ್ತೆ ಅಕ್ಟೋಬರ್–ನವೆಂಬರ್–ಡಿಸೆಂಬರ್ ತಿಂಗಳ ಹಿಂಗಾರ ಸಂಚಿಕೆನ ತಾಕಾತ್ಲೆ. ಇದೀಗ ರಚನೆ ಆದ ನಾಕನೇ ಸಮಿತಿ ಅಧಿಕಾರಲ್ಲುಟ್ಟು. ಯಾವುದೇ ಕಾರಣಕ್ಕೂ ಹಿಂಗಾರ ತ್ರೈಮಾಸಿಕ ನಿಲ್ಲಿಕೆ ಬತ್ತ್‌ತ ಹಿಂದೆನ ಬಾಕಿ ಸಂಚಿಕೆನ ಮುದ್ರಣ ಮಾಡಿ ಮಾನ್ಯ ಓದುಗರ ಕೈಗೆ ಕೊಡ್ತೊಳೊ. ಈ ಸಂಚಿಕೆಲಿ ಹೊಸ ಸಮಿತಿ ಅಧ್ಯಕ್ಷರ್ ಮತ್ತೆ ಸದಸ್ಯರ ಪರಿಚಯನ ಮಾತ್ರ ಕೊಟ್ಟೊಳೊ. ಮುಂದೆನ ಸಂಚಿಕೆಲಿ ಈ ಹೊಸ ಸಮಿತಿ ನಡ್ಸಿದ ಕಾರ್ಯಕ್ರಮಗಳ ವಿವರ ಕೊಟ್ಟವೆ. ಮಾನ್ಯ ಓದುಗರ್ ಸಹಕರ್‍ನೊಕುತ ಮನವಿ ಮಾಡಿಕಂಡವೆ.

– ಪ್ರ. ಸಂ.

# ಹಿಂಗಾರ ಒಳ್ಸೆಕನ

**ಕತಾ ಜೊಂಪೆ**

# ವನವಾಸ

ರೆಂಕೆ ಮುರ್ದ ಹಕ್ಕಿ ಪಿಳ್ಳೆನಾಂಗೆ ವಿಲವಿಲ ಒದ್ದಾಡ್ತ್ ಮೃದುಲನ ಹೂವುನಂತ ಮನ್ಸ್. ಎಂದೂ ಯಾವ ಕಾಯಿಲೆನೂ ಬಾರದ, ಸೀತ, ನೆಗ್ಡಿ, ಜರಗಿರಾಂತ ಒಮ್ಮೆನೂ ಮಲ್ಗದ ಗಂಡ ಇಂದ್ ಒಮ್ಮಲೇ ಹೊಟ್ಟೆ ಬೇನೇಂತ ಹೊಟ್ಟೆನ ಹಿಡ್ಕಂಡ್ ಒದ್ದಾಡ್ದರ ನೋಡಿ ಮೃದುಲ ಕಂಗಾಲಾತ್. ಸಣ್ಣ ಸಣ್ಣ ಯಾವ ಬೇನೆಗೀನೆಗಳ ಹೇಳಿಕಣದ ಗಂಡ ಇಂದ್ ಇತ್ತ ಕುದ್ರಿಕೂ ಆಗದೆ, ಮಲ್ಗಿಕೂ ಆಗದೆ ಕಂಗಾಲಾದರ ಕಂಡ್ ಜೀಪುನ ಬಾಕೆ ಹೇಳಿ ಪೇಟೆನ ದೊಡ್ಡ ಆಸ್ಪತ್ರೆಗೆ ಕರ್ಕಂಡ್ ಹೋದೂಂತ ನಿಗಂಟ್ ಮಾಡ್ತ್.

ಮೃದುಲ ಮತ್ತೆ ದಿವಾಕರನವರ್ದ್ ಒಳ್ಳ ಜೋಡಿ. ಮೊದುವೆ ಆಗಿ ಆರೇಳ್ ವರ್ಸ ಕಳ್ದ್ ಪೊರ್ಲುನ ಎರ್ಡ್ ಹೆಣ್ಣ್ ಮಕ್ಕಳು ಆಗಿದ್ದೊ. ಹುಟ್ಟಿದ ಊರ್ನ ಬುಟ್ಟ್ ಈ ಸರ್ಕಾರಿ ಕೆಲ್ಸಂದಾಗಿ ಪರ ಊರಿಗೆ ಬಾಕಾಗಿ ಬಾತ್. ಇಬ್ಬೊರೂ ಮಾಸ್ಟ್ರಗ ಈಗನ ಕಾಲಕ್ಕೆ ಸೆರಿಯಾಗಿ ಬೊದ್ಕೂಕುತಾರೆ ಇಬ್ಬರಿಗೂ ಕೆಲ್ಸ ಬೇಕೇ ಬೇಕು. ಇಲ್ಲರೆ ಸಂಸಾರದ ತೇರ್ ಮುಂದೆ ಹೋಕಿಲ್ಲೆ. ಗಂಡ ಹೆಣ್ಣ್ ಹೊಂದಾಣಿಕೆನವು. ಇಬ್ಬರ್ದೂ ಒಂದೇ ರೀತಿನ ಆಸೆ ಆಕಾಂಸೆಗ, ಸಾದಾರ್ಣದ ಜೀವನ ಮಟ್ಟ. ಹಾಸಿಗೆ ಇದ್ದಷ್ಟ್ ಕಾಲ್ ನೀಂಡುವ ಸೊಬಾವ. ನವಿಲ್ ಕೊಣ್ದೆಂತ ಕುಪ್ಪುಳು ಮುಲ್ಲೆ ಆಡ್ಸಿರೆ ಆದೆನಾ? ಪುಣ್ಯಕ್ಕೆ ಗಂಡಂಗೆ ಬೀಡಿ ಸಿಗ್ರೇಟ್, ಕುಡಿಗಿಡೀಂತ ಯಾವ ಚಾಳಿನೂ ಇಲ್ಲೆ. ಹಂಗಾಗಿ ಇವರ್ದ್ ಸುಖ, ಸಂತೋಸಂದ ಇದ್ದ ಸಂಸಾರ, ಗಂಡನ ನೆಳ್ಳ್‌ನಂಗೆ ನಡೆವ ಸಾದು ಹೆಣ್ಣ್. ಮಕ್ಕಳೂ ಅಸ್ಟೆ, ತುಂಟಿಗ ಆಗದೆ ಬೆಳೆವ ಸಿರಿ ಮುಂಗೆಲಿ ಕಂಡದೇಂತ ಹೇಳುವ ಹಾಂಗೆ, ಅಯ್ಯೆ ಅಪ್ಪನ ಗುಣಾನೆ ಹೊಂದಿದ್ದೊ. ಒಟಾರೆ ಹೇಳ್ದುತಾರೆ ಬೇರೆವು ಹೊಟ್ಟೆಕಿಚ್ಚಿ ಪಡುವ ಹಾಂಗೆ ಇದ್ದ ಸಂಸಾರ ಇವರ್ದ್.

ಆದರೆ ಇಂದ್ ಗಂಡನ ಹೊಟ್ಟೆ ಬೇನೆ ಮೃದುಲನ ಕಂಗಾಲ್ ಮಾಡ್ತ್. ಪರ ಊರು, ಪರ ಜನ, ತನ್ನೊವೂಂತ ಹೇಳೊವು ಈ ಊರ್ಲಿ ಯಾರು ಇಲ್ಲೆ. ಆದರೂ ಹೆದ್ರದೆ ಬಂದದರ ಎದುಸೋರ್‌ಕೇಂತ ಮನ್ಸ್‌ನ ಗಟ್ಟಿ ಮಾಡಿಕಂಡತ್. ಆಸ್ಪತ್ರೆಗೆ ಸೇರ್ಸಿದ ಮರ್ದಿನೇ ಆಪರ್ಸನ್ ಆಕೂಂತ ಹೇಳ್ದೊ ಡಾಕ್ಟ್ರ. ಗಟ್ಟಿ ಮನ್ಸ್‌ನ ದಿವಾಕರ ಇದಕ್ಕೆ ಸುಲ್ಬಲೇ ಒಪ್ಪಿಕಂಡತ್. ಆದರೆ ಒಂದು ಇಂಜೆಕ್ಸನಿಗೂ ಹೆದ್ರಿ ಕಂಗಾಲಾವ ಪುಕ್ಕೆಲ್ತಿ ಮೃದುಲ ಇದರ ಹೇಂಗೆ ಸಯಿಸಿಕೊಂಬೊದು. ಆದರೆ ಏನೂ ಮಾಡಿಕೂ ಬೊತ್ತದ ಸ್ಥಿತಿ. ಮನ್ಸ್‌ನ ಗಟ್ಟಿ

ಮಾಡಿಕಣೊಕೇ. ಗಂಡ ಉಸಾರಾಗಿ ಮುಂದೆನಾಂಗೆ ಆಕುತಾದರೆ ಧೈರ್ಯ ತಕಣದೆ ಬೇರೆ ಉಪಾಯ ಇಲ್ಲೆ. ಮಕ್ಕಳಿಗೆ ಅಪ್ಪ ಬೇಕು, ನಂಗೆ ಗಂಡ ಬೇಕುಂತ ದೇವ್ರ ಮೇಲೆ ಬಾರ ಹಾಕಿ ಆಪರ್ಸನಿಗೆ ಒಪ್ಪಿತ್ ಮೃದುಲ.

ಗಂಡ ಆಸ್ಪತ್ರೆಲಿ ಬೇನೆ ಕಮ್ಮಿ ಮಾಡುವ ಇಂಜೆಕ್ಷನ್ ಕುತ್ತಿಸಿಕಂಡ್ ನರಳಾಟ ಇಲ್ಲದೆ ಮಲ್ಗಿಯೊಳೊಂತ ಗ್ರೇಸಿಕಂಡ್ ಇರ್ಕನ ಗಂಡ ಹೇಳ್ತಿದ್ದ ಅವು ಹೈಸ್ಕೂಲಿಗೆ ಹೋವ ಸಮೆಲಿ ನಡ್ದ ಸಾವು ಬೊದ್ಕ್‌ನ ಹೋರಾಟದ ಕತೆ ನೆನ್ಪಾತ್. ಅವು ಹದ್ನೈದ್ ದಿನ ಇತ್ತನ ಸೊಯೇನೆ ಇಲ್ಲದೆ ಟೈಪಾಯಿಡ್ ಜರಂದ ಕಂಗಾಲಾಗಿದ್ದೊ ಗಡ. ಹತ್ತ್ ಮೈಲ್ ನಡ್ದ್ ಸಾಲೆಗೆ ಹೋಕಾದ ಕಾಲ! ವಾರಕ್ಕೆ ಎರ್ಡ್ ಸತ್ತಿ ಈ ನಡಿಯಟ, ಮೂರು ಗಂಟೆನ ನಡಿಯಟ. ಒಂದು ಶನಿವಾರ ಮನೆಗೆ ಜರಲಿ ಬೊಳ್ಪುಗೆ 9 ಗಂಟೆಗೆ ಹೊರ್ಟವುಕೆ ಮನೆಗೆ ಎತ್ತ್‌ಕನ ಹಿಂಬೊತ್ 6 ಗಂಟೆ!? ಮನೆಗೆ ಬಂದ್ ಹತ್ತಿದೇ ಗೊತ್ತು, ಮಲ್ಗಿದವಂಗೆ ಇತ್ತನ ಸೊಯೆನೇ ಇಲ್ಲೆ. ಕೆಂಡದಾಂಗೆ ಸುಡುವ ಜೆರ. ಕಾಡ್‌ದಾರಿಲಿ ಬಾಕನ ಯಾವುದೋ ಪೀಡೆನೊ, ಪಿಸಾಚಿನೊ ಸೋಂಕಿರೊಕೂಂತ ಅಪ್ಪ ಮಂತ್ರ ತಂತ್ರ ಮಾಡ್ಸಿ, ನೂಲು ಬೊಸ್ಮ ತಾಕೆ ಓಡ್ಡೊ. ಅವ್ವ ಇದ್ದ ದೆವ್ವ ದೇವ್ರಿಗೆ ಹರ್ಕೆ ಹೊತ್ತ್, ತಲೆ ಮೇಲೆ ಕೈ ಹೊತ್ತ್ ಕುದ್ದೊ. ಯಾದೋರ್ ಪುಣ್ಯಕ್ಕೆ ಊರ್ನ ಪಂಚಾಯಿತಿ ಅಧ್ಯಕ್ಷ ಚಿನ್ನಪ್ಪನವು ಆ ದಾರಿಲಿ ಬಂದೊವು, ವಿಸಯ ಗೊತ್ತಾಗಿ ಹೈದನ ನೋಡಿ, ನೀವು ಏನೇ ನೂಲು ಕಟ್ಟಿ ಬೊಸ್ಮ ಹಾಕಿ, ಆದರೆ ನಾಳೆ ಬೊಳ್ಪುಗೇ ಸುಳ್ಯಕ್ಕೆ ಹೋಗಿ ಡಾಕ್ಟ್ರ ಕರ್ಕಂಡ್ ಬರೋಕೆಂತ ಅಪ್ಪಣೆನೇ ಮಾಡ್ಡೊ. ವಾಹನಲಿ ಬಂದರೂ ಮೂರು ನಾಲ್ಕ್ ಮೈಲ್ ನಡ್ದೇ ಬರಕಾದ ಹಾಳ್ ಕೊಂಪೆ. ಡಾಕ್ಟ್ರ ನಾರಾಯಣ ದೇವ್ರ ಹಂಗೆಂತ ಹೇಳುವಾಂಗೆ ಆ ಕಾಡ್ ದಾರಿಲಿ ಕಲ್ಲ್ ಮುಳ್ಳುಗಳ ಮೆಟ್ಟಿಕಂಡ್ ಬಂದ ಡಾಕ್ಟ್ರ ಪರೀಕ್ಷೆ ಮಾಡಿ ಇದ್ ಟೈಫಾಯಿಡ್ ಜ್ವರಾಂತ ಹೇಳಿ, ಇಂಜೆಕ್ಷನ್ ಕುತ್ತಿ, ಬಾಕಿ ಮೊದ್ದ್‌ನೆಲ್ಲಾ ಕೊಟ್ಟ್ ಯಮನ ದೌಡೆಂದ ಬಚಾವು ಮಾಡ್ದ ಕತೆನ ನೆನ್ಸಿಕಂಡ್ ಇದ್ ಇವರ ಎರ್ಡನೇ ಸಾವು ಬೊದ್ಕ್‌ನ ಹೋರಾಟ! ಇದಲ್ಲೂ ಅವು ಬಚಾವಾದವೆ. ಈಗನ ಕಾಲದ ಆಸ್ಪತ್ರೆ ದೊಡ್ಡ ಡಾಕ್ಟ್ರ ಇರ್ಕನ ನಾ ಹೆದ್ರೊಕೂಂತೇನೂ ಇಲ್ಲೆಂತ ತನಿಗೆ ತಾನೇ ಸಮಾಧಾನ ಮಾಡಿ ಕಂಡತ್ ಮೃದುಲ.

ಹಕ್ಕಲೆ ತನ್ನೊವು ಯಾರು ಇಲ್ಲೆ! ಕರ್ಳ್‌ನ ಕೊಡಿಗೆರ್ಡ್ ಕೋಳಿ ಪಿಳ್ಳೆಗಳಾಂಗೆ ಚಿಂಯೊ ಪಿಯೋಂತ ಹೇಳ್ದು ಬುಟ್ಟರೆ ಎಲ್ಲಾ ನನ್ನ ಪಾಲಿಗೆ ನಿಸಬ್ದ. ಎಲ್ಲಾ ಸೂನ್ಯ. ಒಂದು ಕೂಸು ಅಪ್ಪ ಬೇಕು, ನಾ ಅಪ್ಪನೊಟ್ಟಿಗೇ ಚಾಚೂದೊಂತ ಹೇಳ್ರೆ, ಅದರ್‌ಂದ ಹಂಞ ದೊಡ್ಡ ಕೂಸು ಆಪ್ರೇಸನ್ ಕೋಣೆನ ಬಾಗ್ಲನೇ



ನೋಡಿಕಂಡ್ "ಅಪ್ಪ ಯಾಕಮ್ಮ ಇನ್ನೂ ಹೊರಗೆ ಬಾತ್ಲೆ ಅಪ್ಪಂಗೆಂತ ಆಯಿ? ಬೇಗ ವಾಸಿಯಾಗಿ ಮನೆಗೆ ಬಂದವೆ ಅಲ್ಲಾ"ಂತ ಆಸೆಂದ ಕೇಳ್ತಿತ್ತ್. ಮಕ್ಕ ದೇವ್ರಿಗೆ ಸಮ! ಅವರ ಮಾತ್ ಸಂಜೀವಿನಿ ಹಾಂಗೆ ಕೆಲ್ಸ ಮಾಡ್ದೂಂತ ಮೃದುಲ ಸಮಾಧಾನ ಪಟ್ಟ್‌ಕಂತ್.

ದೇವ್ರೇ ಈ ಎಳೆ ಚಿಗ್ರ್‌ಗ ಬೆಳ್ದ್ ದೊಡ್ಡ ಮರ ಆಕು. ಅದಕೆ ಅಯ್ಯೆ ಅಪ್ಪನ ಪ್ರೀತಿನ ದಾರೆ ಯಾಗೊಳೂ ಇರೊಕು. ಈ ಮಕ್ಕಳಿಗಾಗಿ ತನ್ನ ಗಂಡ ಬೇಗ ಹುಷಾರಾಗಲಿ. ಒಂದು ವೇಳೆ ಏನಾರ್ ಹೆಚ್ಚಿಕಮ್ಮಿ ಆದರೆ? ಇಲ್ಲೆ ಹಾಂಗೆ ಖಂಡಿತಾ ಆಕಿಲ್ಲೆ. ಹಂಗೆ ಆಕೆ ಆಗದ್. ಹಂಗೇನಾದರೂ ಆದರೆ ಅವರ ಹಿಂದೆನೇ ಹೋದು ಕಸ್ಟ ಏನಲ್ಲ. ಮನೆ ಹಿಂದೆನೇ ಬಾಮಿ ಬಾಯಿಬುಟ್ಟ್‌ಕಂಡ್ ಉಟ್ಟು. ಛಿ! ನಾ ಏನ್ ಗೇನ ಮಾಡ್ನೆ? ಈಗ ಆಪರ್ಸನ್ ಸಾಮಾನ್ಯ ಇಚಾರ. ಆಗ ತಾನೆ ಹುಟ್ಟಿದ ಮಾಸದ ಬೊಮ್ಮಟೆನೂ ಆಪರ್ಸನ್‌ಮಾಡಿ ಬೊದುಕುಸುವೆ. ನಾ ಹೆದ್ರೊಕಾಗಿಯೇ ಇಲ್ಲೆ!

ಹೀಂಗೆ ಬೇರೆ ಬೇರೆ ಸಂಗ್ತಿಗಳ ತಾಕಲಾಟಲಿ ಕಂತಿ ಎದ್ದ್‌ಕಂಡ್ ಇರ್ಕನ ದೇವ್ರ ಹಾಂಗೆ ಬಾತ್ ನನ್ನ ಪ್ರೀತಿನ ಅಣ್ಣ. ವಿಸಯ ಯಾರ್‌ಂದನೊ ಗೊತ್ತಾಗಿ ಓಡೋಡಿ ಬಾತ್. ಬೇಜಾರ್ ಸಂಕಟ ಒಂಚೂರು ಕಾಣದಾಂಗೆ ನೆಗೆ ಮೋರೆ ಮಾಡಿಕಂಡ್ ಅಣ್ಣನ ಮಾತಾಡ್ಸಿತ್ ತಂಗೆ. ದುಃಖ ಸಂಕಟಲಿರುವ ತಂಗೆನ ಹೇಂಗಪ್ಪಾ ಕಾಂಬೊದೂಂತ ಹಂಞ ಅಳ್ಕಲೇ ಬಂದ ಅಣ್ಣಂಗೆ ತಂಗೆನ ಮೋರೆ ನೋಡಿ ಉಸ್ಸಪ್ಪಾಂತ ಉಸುರು ಬುಡುವಾಂಗೆ ಆತ್.

ಹಳ್ಳಿನ ಬೊದ್ಕ್, ಗದ್ದೆ ತೋಟಾಂತ ದಿನಾ ಇಡೀ ದುಡ್ತ. ಬಿಸ್ಲ್ ಮಳೆ ಬಂದರೂ ಕ್ಯಾರ್ ಮಾಡದೆ ದುಡ್ದ ಸರೀರ. ಅದರ್‌ಂದ ನೋಡಿಕೆ ಒರ್ಟಾಗಿ ಕಂಡರೂ ಮನ್ಸ್ ಮಾತ್ರ ಮೆದು. ಯಾವುದೋ ಗಳಿಗೆಲಿ ಹೊರಗೆ ಬಂದ ಡಾಕ್ಟ್ರ "ರಕ್ತ ಕೊಡಬೇಕಾದರೆ ನಿಮ್ಮವರು ಯಾರಿದ್ದಾರೆ?" ಅಂತ ಕೇಳ್ಕನ ಈ ಬಡಪಾಯಿ ಅಣ್ಣ "ಎಷ್ಟು ರಕ್ತ ಬೇಕೊ ತೆಗೆದುಕೊಳ್ಳಿ..." ಅಂತ ಹೇಳಿ ಮುಂದೆ ಬಾತ್. ಹಂಗೇನೂ ಪುಡಿಕನೆ ಇರದ ಅಣ್ಣನ ಸರೀರಂದ ನೆತ್ರ್ ತೆಗಿಯೊದಾ? ಬೇಡಪ್ಪಾ ಬೇಡ. ನೆತ್ರ್ ಕೊಡುದರ್‌ಂದ ಇಬ್ಬೊರಿಗೂ ಕಸ್ಟನೆ. ನೆತ್ರ್ ತೆಕಣಕಾದ ಪಜೀತಿ ಗಂಡಂಗಾದರೆ, ನೆತ್ರ್ ಕೊಡಕಾದ ಅನಿವಾರ್ಯತೆ ಅಣ್ಣಂಗೆ! ಆ

ಹೆಣ್ಣ್ ಮನ್ಸ್‌ನ ಬೇನೆ ದೇವ್ರಿಗೆ ಗೊತ್ತಾತೊ ಏನೋ ನೆತ್ರ್ ಕೊಡುವ ಪ್ರಸಂಗನೇ ಪುಣ್ಯಕ್ಕೆ ಬಾತ್ಲೆ.

ಮನೆಲಿ ಕೂಸುನ ನೋಡಿಕಂಬ ಗೂಡೆನೊಂದರ ಬುಟ್ಟರೆ ಬೇರೆ ಯಾರೂ ಇಲ್ಲೆ. ಸಣ್ಣ ಕೂಸುನ ಕಟ್ಟಿಕಂಡ್ ಆಸ್ಪತ್ರೆಲಿ ಇರಿಕೆ ಬೊತ್ತ್. ಏನ್ ಮಾಡ್ದು, ಹೇಂಗೆ ಸುದಾರ್ಸುದೂಂತ ಮೃದುಲಂಗೆ ಎತೆ. ಹೇಂಗಾರ್ ಕೆಲ್ಸ ಗಿಲ್ಸ ತೂಗ್ಸಿಕಂಡ್ ಹೋಕು. ನಂಗೆ ಹೊಟ್ಟೆ ಹಸಿಯೊದ್ಲೆ, ಕುಡಿಯಕೆ ಆದುಲೆ. ತಾನೊಂದು ಮರದ ಕುಂಟೆಂತ ಹೇಳುವಾಂಗೆ ಆಗಿತ್ತ್. ಆದರೆ ಮೃದುಲನ ಒಳ ಮನ್ಸ್ ಚೀರಿ ಚೀರಿ ಎಚ್ಚರ ಮಾಡ್‌ತ್ತಿತ್ತ್. ನೀ ಈ ಸಮೆಲಿ ಚೈತನ್ಯದ ಚಿಲುಮೆ ಆಕು, ನಿನ್ನ ಮುಂದೆ ಎಷ್ಟೋ ಕೆಲ್ಸ ಕಾರ್ಯಗ ಬಿದ್ದುಟ್ಟು. ಕೆಲ್ಸ ಮಾಡೊಕುಂತಾದರೆ ಊಟ, ನಿದ್ದೆ, ವಿಶ್ರಾಂತಿ ಮೊನ್ಸಂಗೆ ಬೇಕೆ ಬೇಕು. ಆದಸ್ಟ್ ಮನ್ಸ್‌ನ ಗಟ್ಟಿ ಮಾಡಿಕಂಡ್ ಇರಿಕೆ ನೋಡು. ಆ ದಿನ ಇರ್ಲ್ ಬಾರಿ ದೊಡ್ಡದಾಗಿತ್ತ್. ಎಸ್ಟ್ ಹೊತ್ತಿಗೆ ಬೊಳಿ ಆದೇಂತ ಕಾಯುವ ಹಾಂಗೆ ಆತ್. ಅಂತೂ ಇಂತೂ ಅಕೇರಿಗೊಮ್ಮೆ ಬಾನಲಿ ಬೆಳೀ ಚುಕ್ಕಿ ಮೂಡ್ತ್. ಕೋಳಿ ಕೂಂಗಿತ್... ಅರೆ ನಿದ್ದೆಲಿದ್ದ ಮೃದುಲ ಎದ್ದತ್.

ವಿಸಯ ಗೊತ್ತಾಗಿ ಊರವು ಆಸ್ಪತ್ರೆಗೆ ದಾಳಿ ಇಸಿದೊ. ಸಾಲೆ ಮಕ್ಕಳ ಪಟಲಾಮು ಬಂದ್ ತಮ್ಮ ನೆಚ್ಚಿನ ಗುರುಗಳ ನೋಡಿ ಹೋತ್. ಜೋಸ್ತಿಗ, ಸಾಲೆನ ಮಾಸ್ಟ್ರ್‌ಗ ಎಲ್ಲಾ ಬಂದ್ ಕಾಯಿಲೆಲಿ ಮಲ್ಗಿದ ಮಾಸ್ಟ್ರ ನೋಡಿ ಹೋದೊ. ಮೊನ್ಸನ ಪ್ರೀತಿ, ಪ್ರೇಮ ಎಂತದ್‌ಂತ ಗೊತ್ತಾತ್. ದಿನಂದ ದಿನಕ್ಕೆ ಸುಕ್ಲ ಪಕ್ಷದ ಚಂದ್ರನಾಂಗೆ ಹುಷಾರಾಗ್ತಾ ಬಂದೊ ದಿವಾಕರ.

ತೌರುಗೆ ಹೋಗಿ ನಾಲ್ಕಾರ್ ದಿನ ಗಂಡನ ಬುಟ್ಟ್ ಇರಿಕೆ ಆಗದ ಮೃದುಲ ಹನ್ನೊಂದು ದಿನಗಳ ದೀರ್ಗ ಕಾಲದ ವನವಾಸನ ಯುಗದ ಹಾಂಗೆ ಕಳಿಯಕಾಗಿ ಬಾತ್. ರಾಮಂದ್ ಕಾಡ್ಲಿ ವನವಾಸ ಆದರೆ ಮೃದುಲಂದ್ ನಾಡ್ಲಿ ವನವಾಸ! ಬಡ್ಕಲಾದ ಎರ್ಡ್ ಕೈಗಳ್‌ಂದ ತಮ್ಮ ಪ್ರೇಮದ ಪುತ್ತೊಳಿಗಳ ತಬ್ಬಿ ಮುದ್ದಾಡಿಕಂಡ ದಿವಾಕರ ಉಸ್ಸಪ್ಪಾಂತ ಉಸುರು ಬುಟ್ಟೊ. ಹೊರಗೆ ತುಂತುತು ಮಳೆ ಬಂದ್ ಬಾನ ತೆಳ್‌ಕಂಡ್ ಬಾತಿತ್ತ್. ಕಣ್ಣ್ ಮುಚ್ಚಾಲೆ ಆಡಿಕಂಡಿದ್ದ 'ದಿವಾಕರ' ಒಮ್ಮೆ ಮೋಡದ ಮರೆಂದ ನಿಲ್ಕಿತ್.

✍ಪಿ.ಜಿ. ಅಂಬೆಕಲ್

# ನಮ್ಮ ಕನ್ನಿಕೆ ಹಸ್ನ ಪ್ರಸಂಗ

ನಮ್ಮ ಕೆಂಚ ಕರ್ನ ನಿಮಿಗೆ ಗೊತ್ತಿರ್ಕಿಲೆ. ಅದೇ ನಮ್ಮ ಕನ್ನಿಕೆ ಹಸ್‌ದ್ ಎರಡನೇ ಕರ್. ಹಿಂಗೇ ಹೇಳಿರೆ ಸಹ ಪೂರ ಹೇಳ್ದಂಗೆ ಅದುಲೆ. ನಮ್ಮ ಹಟ್ಟಿಲಿ ಇರುವ ಕನ್ನಿಕೆ ಹಸ್, ದಿನಕ್ಕೆ ಒಂದು ಚೊಂಬು ಹಾಲ್ ಕೊಟ್ಟದಲೆ....., ಅದರ ಕಥೆನ ನಾನ್ ಈಗ ಹೇಳಿಕೆ ಹೊರಟದ್. ದಿನಾ ಸಾಯಂಕಾಲ ಹಟ್ಟಿಗೆ ಬರ್ತಿದ್ದ ಹಸ್ ಅಂದ್ ಬಾತ್ಲೆ. ದನ ನೋಡಿಕೆ ಹೋಗಿದ್ದ ಕುಂಞಾಂಬು ಹೈದನ ಕೇಳಿರೆ, "ನಾಕ್ ಗಂಟೆವರೆಗೆ ಕಾಡ್ ಕರೇಲಿ ಬೇರೆ ದನಗಳ ಒಟ್ಟಿಗೆ ಮೇಯ್ತಾ ಇತ್ತ್, ಮತ್ತೆ ಅದರ ಕಂಡತ್ಲೆತ" ಬುಕ್ಕಿಕಂಡ್ ಹೇಳಿ ಮರ್ಡಿಕೆ ಸುರು ಮಾಡಿತ್. ಅಪ್ಪ ಮೂಲೆಲಿದ್ದ ಬೆತ್ತ ಕೋಲ್‌ನ ಒಮ್ಮೆ ನೋಡಿತ್.



ಕನ್ನಿಕೆ ಹಸ್‌ಗೆ ಒಂದ್ ಚಾಳಿ ಇತ್ತ್. ವಾರಕ್ಕೆ ಒಂದ್ ಸಲ ಆದರೂ ನಮ್ಮ ದೊಡ್ಡಪ್ಪನ ತೋಡು ಕರೆ ಗದ್ದೆಗೆ ನುಗ್ಗಿ ಬೆಳೆ ತಿಂಬದು ಮತ್ತೆ ಅಂದೆ ರಾತ್ರಿ ನಮ್ಮ ದೊಡ್ಡಪ್ಪ ಸ್ವಲ್ಪ ಜಾಸ್ತಿ ಡೋಸ್ ಹಾಕಿ ದೊಡ್ಡಮನೆ ಅಂಗಳಲಿ ನಿಂತ್ ತಾರಾಮಾರಾ ಬಾಯಿ ಬಡಿಯದು ಮಾಮೂಲು. "ಗದ್ದೆಗೆ ಹೋಗಿ ನೋಡಿಕಂಡ್ ಬಾ" ತ ಅಪ್ಪ ನನ್ನ ಓಡಿಸಿತ್. ನಾನ್ ದೊಡ್ಡಪ್ಪನ ಗದ್ದೆ ಹತ್ರ ಎಲ್ಲಾ ಕಡೆ ಸುತ್ತಾಡಿ ನೋಡ್ರು ಹಸ್ ಪತ್ತೆ ಇಲ್ಲೆ. ಹಂಗೆ ಓಡಿಬಂದ್ ಅಪ್ಪಂಗೆ ಹೇಳ್ದೆ. "ದಿನ ತುಂಬಿದ ಗಬ್ಬದ ಹಸ್, ಎಲ್ಲಿ ಕರ್ ಹಾಕುಟ್ಟೊ.. ಏನೊ..ತ" ಅವ್ವ ಪಿರಿ ಪಿರಿ ಹೇಳಿಕೆ ಸುರು ಮಾಡ್‌ತ್. ಕತ್ತಲೆ – ಕತ್ತಲೆ ಆಗ್ತಿತ್ತ್. ಅಪ್ಪ ತಲೆಗೆ ಹೆಡ್ಲೈಟ್ ಕಟ್ಟಿಕಂಡ್, ಕೋವಿಗೆ ಎರಡನೇ ನಂಬರ್ ತೋಟ ತುಂಬುಸಿ, "ಬಾನೆ... ಹಸ್ ಎಲ್ಲಿ ತಪ್ಪಿಸಿಕಂಡುಟ್ಟು, ಕರ್–ಗಿರ್ ಹಾಕಿಟ್ಟೋ.. ಏನ್ ಕಥೆನೋ"ತ ಹೇಳಿಕಂಡ್ ನನ್ನ ಕರ್ಕಂಡ್ ಕಾಡಿಗೆ ಹೊರ್ಟತ್. ಹಸ್ನ ಹೆಸರ್ ಹೇಳಿ ಜೋರಾಗಿ ಕರ್ಕಂಡ್ ಅಪ್ಪ ಮುಂದೆ ನಾನ್ ಹಿಂದೆ ಕಾಡ್ ದಾರಿಲಿ ಹೊರಟೊ. ಅಪ್ಪನ ಹೆಡ್‌ಲೈಟ್ ಗಿಡ ಮರಗಳ ಮೇಲೆ ಬೆಳಕ್ ಬೀಳ್ಕನ ಕಾಡೊಳಗೆ ಚರಪರ ಸದ್ದ್ ಆಕನ ನಂಗೆ ಚಾಮೆವ್ವ ಹೇಳ್‌ತ್ತಿದ್ದ ದೆವ್ವದ ಕಥೆ ಗ್ಯಾನಾಗಿ ಹೆದರಿಕೆ ಸುರು ಆತ್. ಕಾಡ್ ದಾರಿಲಿ ಎತ್ತರ ತಗ್ಗ್–ಕಲ್ಲ್ ಬೇರ್ ಇದ್ದರ್‌ಂದ ನಡಿಯಕನ

ಎಡ್ಗಿ ಕಾಲ್‌ದ್ ಹೆಬ್ಬೆರಳ್ ಗಾಯ ಆಗಿ ಕುಂಟಿಕಂಡ್, ಮರ್ಟ್‌ಕಂಡ್ ಅಪ್ಪನ ಹಿಂದೆ ಕತ್ತಲೆಲಿ ಹೆಜ್ಜೆ ಹಾಕ್ತಿದ್ದೆ. ಎಲ್ಲಿ ಕೂಡ ಕನ್ನಿಕೆ ಹಸುನ ಪತ್ತೆಯಿಲ್ಲೆ. ಕಾಡು ಸುತ್ತಿ ಸಾಕಾಗಿ ವಾಪಸ್ಸು ಪೋಯಿ, ಅದರನ ಎಲ್ಲಿ ಹುಲಿ ಹಿಡ್ದೊತ ಅಪ್ಪ ಬೈಕ್ಕಂಡ್ ಮನೆಕಡೆ ತಿರುಗಿದೊ. ಹಂಗೇ ಪುನಃ ಒಮ್ಮೆ ದೊಡ್ಡಪ್ಪನ ಗದ್ದೆಗಾಗಿ ಪೋಯಿತ ಅಪ್ಪ ಹೇಳ್ವಾಕನ ನಾನ್ ಕತ್ತಲೆಲಿ ತಲೆ ಆಡಿಸಿದೆ. ಕಾಡು ದಾಟಿದಂಗೆ ಕಾಪಿ ತೋಟ, ಒಂದ್ ಪಾಲ ಹಾಕಿದ ತೋಡು ದಾಟಿರೆ ದೊಡ್ಡಪ್ಪನ ಗದ್ದೆ. ಅದರ ಕೆಳಗೆಲ್ಲ ನಮ್ಮ ಗದ್ದೆಗ.

ಕಾಡ್‌ಕರೆಲಿ ಕಾಫಿತೋಟದ ಬೇಲಿ ಒಟ್ಟಿಗೆ ಸುರ್ಕುಳಿ ಉಟ್ಟು. ಅಲ್ಲಿಗೆ ಬಾಕನ ಯಾಕೋ ಆಟಿತಿಂಗಲಿ ಸತ್ತ ಮೇಲೆ ಮನೆ ಅಜ್ಜನ ಅಲ್ಲಿ ಸುಟ್ಟದ್ ನೆನ್ಪಾಗಿ ದೆವ್ವ ಕೊಲೆಗಳ ಹೆದರಿಕೆ ಸುರು ಆತ್. ಅಪ್ಪ ತಲೆಗೆ ಹೆಡ್ಲೈಟ್ ಕಟ್ಟಿಕಂಡ್ ಕೈಲಿ ಕೋವಿ ಹಿಡ್ದ್ ಮುಂದೆ ನಡ್ದರೆ ನಾನ್ ಕತ್ತಲೆಲಿ ಎಡಿಗಿಕಂಡ್ ಹಿಂದೆಂದ ಕುಂಟಿಕಂಡ್ ಹೋಕನ, ಆಕಡೆ–ಈಕಡೆ ಸೊಪ್ಪು ದರ್ಗ್ ಚರಪರ ಸದ್ದ್ ಕೇಳ್ದಂಗೆ ಆಗ್‌ತಿತ್ತ್. ಅಪ್ಪನ ಕರ್ದರೆ "ಸುಮ್ಮನೆ ಬಾನೆ" ತ ಬೈತ್. ಆದರೂ ಚರಪರ ಸದ್ದ್ ಜೋರಾಗಿ ಕೇಳಿದಂಗೆ ಆಗಿ ಪುನ "ಅಪ್ಪ... ನಂಗೆ ಹೆದರಿಕೆ ಆದೇ"ತ ಜೋರಾಗಿ ಕಿರ್ಚಿದೆ. "ಇಂವ ಒಂದ್ ಸನಿ, ಹೆದುರಿ ಸತ್ತದೇತ" ಅಪ್ಪ ನನ್ನ ಕಡೆ ಲೈಟ್ ಬುಟ್ಟ್, "ಎಂತನೆ ನಿಂದ್"ತ ಕೇಳ್ತ್. ಅಷ್ಟೊತ್ತಿಗೆ ಹತ್ರಲೇ ಬುಸುಗುಟ್ಟಿದಂಗೆ ಸದ್ದಾಕನ ಅಪ್ಪನ ಲೈಟ್ ಅತ್ತ ತಿರ್ಗಿತ್. ಅಲ್ಲಿ ಕತ್ತಲೆಲಿ ಎರಡ್ ಕಣ್ಣ್‌ಗ ಹಸ್ರ ಲೈಟ್‌ನಂಗೆ ಹೊಳಿತಾ ಉಟ್ಟು! ಇದ್ ಆಟಿ ತಿಂಗಲಿ ಸತ್ತ ಮೇಲೆ ಮನೆ ಅಜ್ಜನ ದೆವ್ವತ ಗ್ಯಾನ ಮಾಡಿ ನಂಗೆ ಹೆದರಿಕೆಗೆ ಮೈಯೆಲ್ಲಾ ರೋಮಗ ಎದ್ದ್ ನಿಂತತ್. ಅಷ್ಟೊತ್ತಿಗೆ "ಸುಟ್ಟದ್ ಇಲ್ಲಿ ಮಲಿಗುಟ್ಟು"ತ ಅಪ್ಪ ಬೈಕಂಡ್, "ಕನಿಕೆ... ಬಾ"ತ ಕರಿಯಕನ ಮತ್ತೊಮ್ಮೆ ಅತ್ತಂದ ಬುಸುಗುಟ್ಟಿದ ಸದ್ದ್ ಕೇಳಿಸಿತ್. ಈಗ ಪಳಪಳ ಹೊಳಿತಾ ಇದ್ದ ಕಣ್ಣ್‌ಗ ನಮ್ಮ ಕನ್ನಿಕೆದ್‌ತ ಗೊತ್ತಾಗಿ ನಂಗೆ ಕುಸಿ ಆತ್. ಹತ್ರ ಹೋಗಿ ನೋಡಿರೆ ಹಸುನೊಟ್ಟಿಗೆ ಒಂದ್ ಕೆಂಪು ಕರ್ ಬಾಲ ಆಡ್ಸಿಕಂಡ್ ಅವ್ವನ ಹಾಲ್ ಕುಡ್ಕಂಡ್ ನಿಂತಿತ್ತ್. ಕನ್ನಿಕೆಗೆ ನಮ್ಮ ಸಿಂಡ್ ಗೊತ್ತಾಗಿ ಸುಮ್ಮನೆ ನಿಂತತ್. ಅಪ್ಪ ಅದರ "ಬಾತ" ಕರಿಯಕನ ಒಮ್ಮೆ ಬಾಲ ಅಲ್ಲಾಡಿಸಿತ್. ಅಪ್ಪ ಕೋವಿನ ನನ್ನ ಕೈಗೆ ದಾಟಿಸಿ ಮೆಲ್ಲಂಗೆ ಬಗ್ಗಿ ಕರ್‌ನ ಎರಡ್ ಕೈಲಿ ಎತ್ತಿಕಂಡ್ ಮುಂದೆ ಹೊರಡುಕನ ಕನ್ನಿಕೆ ಹಸ್ ಕರ್‌ನ ಮೂಸಿಕಂಡ್ ಅಪ್ಪನ ಹಿಂದೆ ಹೆಜ್ಜೆ ಹಾಕಿತ್. ಈಗ ಕೊಲೆ ದೆವ್ವದ ಹೆದರಿಕೆ ನಂಗೆ ಇತ್ತಲೆ. ಕೊತ್ತ್ ಎಳಿಯಕೆ ಆಗದಿದ್ದರೂ ನನ್ನ ಕೈಲಿ ಕೋವಿ ಇತ್ತ್. ಜೊತೆಲಿ ನಮ್ಮ ಹಸ್–ಕರ್ ಎರಡೂ ಇದ್ದೊ. ದನಗಳ ಮಧ್ಯ ಇದ್ದರೆ ಎಂಥಾ ದೆವ್ವ ಬೂತಗ ಮನುಷ್ಯರ ಮುಟ್ಟುದುಲೆತ ಚಾಮೆವ್ವ ಹೇಳ್‌ತ್ತಿದ್ದ ಕಥೆ ಗ್ಯಾನಾತ್. ಹಸ್–ಕರ್ ನ ಹಟ್ಟಿಗೆ ತಂದ್ ಕಟ್ಟಿ, ಹುಲ್ಲ್ ಹಾಕಿದೊ. ಕೆಂಪು ಕರ್ ಹೆಣ್ಣ್ ಕರ್‌ತ ಗೊತ್ತಾಗಿ ಅವ್ವನ ಮುಖ ಕುಸಿಲಿ ಮೊರದಷ್ಟ್ ಅಗಲ ಆತ್.

✍ ವಿಶ್ವನಾಥ್ ಎಡಿಕೇರಿ.

## ಕವನ ಜೊಂಪೆ

# ದೇವರ ದಯೆ

ಮುಳ್ಳ ಕೊಡಿಲಿ ಮೂರು ಕೆರೆ ಕಡ್ಸಿದೊ
ಎರಡ್ ಖಾಲಿ ಒಂದು ತುಂಬಿತೇ ಇಲ್ಲೆ.
ತುಂಬದ ಕೆರೆಗೆ ಬಂದೊ ಮೂವರೊಡ್ಡರ್
ಇಬ್ಬರ್ ಅಂದಗರ್ ಒಬ್ಬಂಗೆ ಕಾಲೇ ಇಲ್ಲೆ
ಕಾಲಿಲ್ಲದ ಒಡ್ಡಂಗೆ ಕೊಟ್ಟೊ ಮೂರು ಎಮ್ಮೆಗಳ
ಎರಡ್ ಗೊಡ್ಡು ಒಂದಕೆ ಕರುನೇ ಇಲ್ಲೆ
ಕರ್ ಇಲ್ಲದ ಎಮ್ಮೆಗೆ ಬಂದೊ ಮೂವರ್ ಗಿರಾಕಿಗ
ಇಬ್ಬರ್ ಕುರ್ಡರ್ ಒಬ್ಬಂಗೆ ಕಣ್ಣೇ ಇಲ್ಲೆ.
ಕಣ್ಣಿಲ್ಲದ ಗಿರಾಕಿಗೆ ಕೊಟ್ಟೊ ಮೂರು ಊರು
ಎರಡ್ ಹಡಿಲ್ ಒಂದರ್ಲಿ ಒಕ್ಕಲೇ ಇಲ್ಲೆ.
ಒಕ್ಕಲಿಲ್ಲದ ಊರಿಗೆ ಬಂದೊ ಮೂವರ್ ಕುಂಬಾರರ್
ಇಬ್ಬರ್ ಚೊಂಚರ್ ಮತ್ತೊಬ್ಬಂಗೆ ಕೈಯೇ ಇಲ್ಲೆ
ಕೈ ಇಲ್ಲದ ಕುಂಬಾರ ಮಾಡ್ತ್ ಮೂರು ಮಡಕೆ
ಎರಡ್ ಒಡಕ್ ಮತ್ತೊಂದಕೆ ಅಡಿಯೇ ಇಲ್ಲೆ.
ಅಡಿ ಇಲ್ಲದ ಮಡಕೆಗೆ ಹಾಕಿದೊ ಮೂರು ಅಕ್ಕಿ ಕಾಳ್
ಎರಡ್ ಹಾಂಗೇ ಒಳ್ತ್ ಮತ್ತೊಂದು ಬೇತೇ ಇಲ್ಲೆ
ಬೇಯದ ಅಕ್ಕಿಗೆ ಮೂರು ಜನ ನೆಂಟ್ರ್ ಬಂದೊ
ಇಬ್ಬರ್ ಊಟ ಮಾಡ್ತಿಲ್ಲೆ ಮತ್ತೊಬ್ಬಂಗೆ ಹಸಿವೇ ಇಲ್ಲೆ.
ಹಸಿವಿಲ್ಲದ ನಂಟಂಗೆ ಬೀಸಿ ಮೂರು ಗುದ್ದು ಹಾಕಿದೊ;
ಎರಡ್ ತಪ್ಪಿ ಹೋತ್ ಮತ್ತೊಂದು ತಾಂಗಿತೇ ಇಲ್ಲೆ.
ತಾಂಗದ ಗುದ್ದುಗಳ ತಾಂಗಿಸಿ ಸದ್ಗತೀನ
ಕೊಡೋಂವ ಪುರಂದರ ವಿಠಲ ಸ್ವಾಮಿ.

✍ಕುತ್ಯಾಳ ನಾಗಪ್ಪ ಗೌಡ (ಕಿರಣ)
(ಮೂಲ : ಪುರಂದರದಾಸರ ಹಾಡು)

# ಕಾಡ್‌ನ ಪಾಟಸಾಲೆ



ಕಾಡ್‌ನ ಪ್ರಜೆಗಳ ಸಭೆನಕರ್ತ್
ಪಟ್ಟಲಿ ಕುದ್ದ ಮೃಗರಾಜ
ಕಾರ್ಯಕ್ರಮಗಳ ತಯಾರ್ ನಡ್ಸಿತ್
ಪ್ರಧಾನಮಂತ್ರಿ ಹುಲಿರಾಯ
    ಪ್ರಾಣಿ ಪಕ್ಷಿಗ ಹಿಂದೆ ಬೀಳಿಕೆ
    ವಿದ್ಯೆ ಇಲ್ಲದ್ದೆ ಕಾರಣತೇಳಿ
    ಕಲಿದರ ಕಡ್ಡಾಯ ಮಾಡಿಕೆ ಕೇಸರಿ
    ಕಾಡ್‌ನ ಸಭೆನ ಕರ್ತ್ ನೋಡಿ
ಕಾಡ್‌ನ ಮೂಲೆ ಮೂಲೆಗಳ್‌ಂದ
ಹಕ್ಕಿಗ ಬಂದೊ ಹಾರಿ
ಎಲ್ಲೆಲ್ಲಿ ಇದ್ದ ಕುರೆಗ ಕೂಡಾ
ಬಂದೊ ಮರಗಳ ಏರಿ

ಸರಸರ ಬಂದೊ ಹಾವುಗ ಹರ್ದ್
ಇರಇರಗೆಲ್ಲ್‌ನ ಆನೆಗ ಮುರ್ದ್
ಕರಿಕರಿ ಬಣ್ಣದ ಕರ್ಡಿಗ ಕೂಡಾ
ಪಿರಿಪಿರಿ ಮಾಡದೆ ಬಂದೊಗಡಾ
ಕಾರ್ಯಕ್ರಮಗ ಸುಸೂತ್ರ ನಡಿಯಕೆ
ಪ್ರಾರ್ಥನೆ ಗೀತೆನ ಕೋಗಿಲೆ ಹಾಡ್ತ್
ಸೊಂಡಿಲ್ ನೇಚಿ ವಾಲಗ ಉರ್ಗಿ
ಸರ್ವರ ಸ್ವಾಗತ ಗಜಪಡೆ ಮಾಡ್ತ್
ಪ್ರಸ್ತಾವನೆಲಿ ರಾಜ ಸಿಂಹ
ವಿದ್ಯೆನ ಅಗತ್ಯನ ಹೇಳ್ತ್
ಕೊಣ್ತ ಸಂಗೀತ ಈಜು ಸರ್ಕಸ್
ಎಲ್ಲೊವು ಕಲಿಯೊಕುತೇಳ್‌ತ್
ಸಂಗೀತ ಪಾಠನ ಕಲ್ಸುವ ಕೆಲ್ಸ
ಕೋಗಿಲೆ ಪಾಲ್‌ಗೆ ಹೇಂಗೆ
ನವುಲಕ್ಕಂಗೆ ನಾಟ್ಯನ ಕಲ್ಸುವ
ಕೆಲ್ಸನೂ ಬಾತ್ ಹಾಂಗೇ
ಸರ್ಕಸ್ ಕಲ್ಸಿಕೆ ಮಂಗಣ್ಣಂಗೆ
ಎಲ್ಲರ ಒಪ್ಪಿಗೆ ಸಿಕ್ಕಿತ್ತ್
ಮೀಸಿಕೆ ಕಲ್ಸುವ ಮೊಸಳೆ ಮಾವನ
ಹುಸಿ ನೆಗೆಲಿ ಏನೋ ಸಂಚಿತ್
ಸಂಗೀತ ಸಾಲೆಗೆ ಕತ್ತೆ ಕುದ್ಕಂಗ
ಎಲ್ಲೊವೂ ಬಂದ್ ಸೇರಿಕಂಡೊ
ಅರ್ಚಿಕಂಡ್ ಕಿರ್ಚಿಕಂಡ್ ಸರಿಗಮ ಹೇಳ್ಕನ
ಕೇಳ್ದೊವು ಕೆಬಿಗಳ ಮುಚ್ಚಿಕಂಡೊ
ನವುಲುನ ನಾಟ್ಯ ಸಾಲೆಗೆ ಬಾತ್
ಕೆದ್‌ರಿಕಂಡ್ ಗರಿಗಳ ಕೆಂಬೂತ
ನರ್ತನ ಮಾಡಿ ನಾಚಿಕೆಲಿ ಓಡಿ

ಕಾಲ್‌ನ ಮುರ್ಕಂಡತ್ ಹೋಂತ
ಮರಂದ ಮರಕೆ ಹಾರ್ದರ ಕಲ್ಸಿತ್
ಸರ್ಕಸ್ ಮಾಸ್ಟ್ ಮಂಗಣ್ಣ
ಹಾರಿಕೆ ಹೋಗಿ ಆಗದೆ ಏಗಿ
ಹೊಣ್‌ಕಿ ಬೀತ್ ಕರಿಕೋಣ
ಮೀಸುವ ನೆವನಲಿ ಒಂದೊಂದೇ
ಮಿಕಗಳ ನೂಂಗಿತ್ ಕಪಟಿ ಮೊಸಳೆ
ತಿರ್ಗಿ ಬಂದ್ ಕಣ್ಣೀರ್ ತಂದ್
ಹೇಳ್ತಿತ್ತ್ ತಾನ್ ಹಸುಳೆ
ಶಿಕ್ಷಣ ನೀತಿನ ಗೆಲುವುನ ಅಳಿಯಕೆ
ನೇಮಕ ಆತ್‌ಚಿರತೆ
ವಿಸ್ತೃತ ವರದಿ ಬೇಗ ಬೇಗ ತರ್ಸಿ
ತೋರ್ಸಿ ಕೊಟ್ಟತ್ ಕೊರ್‌ತೆ
ಎಲ್ಲಾ ವಿದ್ಯೆನ ಎಲ್ಲೊವು ಕಲಿದು
ಅಗತ್ಯ ಇಲ್ಲತೆ ಮನಗಂಡ್
ಸೊಬಾವ ಸಹಜ ಕೌಶಲಗಳ್ನ
ಕಲಿಯಕೆ ಹೇಳ್ತ್ ತಿಳ್ಕಂಡ್
ರಾಜನ ಆಜ್ಞೆ ಹೊರ್ಟಕೂಡ್ಲೆ
ಚಂಗನೆ ಮರ ಏರ್‌ತ್ ಮಂಗ
ತಕಧಿಮಿ ಕೊಣ್ತ್ ಬಣ್ಣದನವುಲು
ಬುಡ್ಸಿಕಂಡ್ ಗೆರಿಗಳ ಲಂಗ
ಯಾಗೊಳುನಾಂಗೆ ಜೇನ್‌ನ ದನಿಲಿ
ಹಾಡಿಕೆ ಕೋಗಿಲೆ ಸುರುಮಾಡ್ತ್
ಗುಟ್ಟು ರಟ್ಟಾದುತ ಹೆದ್‌ರಿದ ಮೊಸಳೆ
ನಾಚಿಕೆಲಿ ಮಡು ನೊಡುಗೋಡ್ತ್!!

✍ಲೀಲಾ ದಾಮೋದರ

# ಒಂದೊಂದೆ ನಂಗೆ ಈಗ ಗ್ಯಾನಾದೆ



ಒಂದೊಂದೆ ನಂಗೆ ಈಗ ಗ್ಯಾನಾದೆ
ನಾ ಹುಟ್ಟಿ ಬೆಳ್ದ ಮುತ್ತಾರ್‌ಮುಡಿ ಗ್ರಾಮ
ಅರೆಬಾಸೆಲೇ ಆಡಿ ಪಾಡಿ ಕಲ್ತ ಈ ಶಾಲೆ
ಒಂದೊಂದೆ ನಂಗೆ ಈಗ ಗ್ಯಾನಾದೆ

ದೇವಜನ ಚಿನ್ನಪ್ಪ ಮಾಸ್ಟ್ರ ಗಿಂಗ್ಯಾಂಗೋ ಪದ್ಯ
ಪಾರೆಮಜಲು ವಿಶಾಲಾಕ್ಷಿ ಟೀಚರ ಭತ್ತ ಬಂತು ಬಯಲಿಗೆ
ತಮ್ಮಚನ ಗೋಪಾಲ ಮೆಸ್ಟ್ರ ಸೈಕಲ್ ಗಂಟೆನ ಶಬ್ದ
ಒಂದೊಂದೆ ನಂಗೆ ಈಗ ಗ್ಯಾನಾದೆ.

ಆತ ಗಣಪ, ಈತ ಈಶ, ಈಶನ ಮಗ ಗಣಪ
ಕಮಲಳ ಲಂಗ ಝುಳ ಝುಳ
ಢಣ ಢಣ ಗಂಟೆ ಹೊಡೆತ್ತಿದ್ದದ್
ನಂಗೆ ಒಂದೊಂದೆ ಈಗ ಗ್ಯಾನಾದೆ.

ಹಗ್ಗ ಕಟ್ಟಿ ಉದ್ದಕ್ಕೆ ಮಕ್ಕ ಬಾವಿಂದ ನೀರ್ ಎಳ್ದದ್
ಬಕೆಟ್‌ನ ಒಟ್ಟಿಗೆ ತೆಕ್ಕಡೆ ರಮೇಶ ಹೈದ ಬಾವಿಗೆ ಬಿದ್ದದ್
ಕೋಡಿ ನೇಮ್‌ರಾಜ ಅಂವನ ಮೇಲಕ್ಕೆ ಎಳ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ.

ಪಾರೆಮಜಲ್‌ಂದ ಬೆಂಕಿ ಕೆಂಡ ತಕಬಾತಿದ್ದದ್
ಬೆಂಕಿ ಮಟ್ಟ ನಾವೇ ಉಪ್ಪಿಟ್ಟ್ ಮಾಡ್ತಿದ್ದದ್

ನಿಂಬುಳಿ ಹಿಂಡಿ ಅದರ್ನ ಓಂ ಸಹನಾಭವತ್ತು ಹೇಳಿ ತಿಂಬತ್ತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ.

ಬೆಣ್ಣೆ ಕಡ್ಡಿನ ಚಡ್ಡಿ ಜೋಬುಂದ ತೆಗ್ದ್ ಬರೆತಿದ್ದದ್
ಸ್ಲೇಟ್‌ಲಿ ಅಕ್ಷರ, ಮಗ್ಗಿ, ಕೂಡಿ ಕಳ್ದ್ ಲೆಕ್ಕ ಮಾಡ್ತಿದ್ದದ್
ನೀರ್ ಕಡ್ಡಿ ಉಜ್ಜಿ, ಎಂಜಿಲ್ ಹಾಕಿ ಅದರ್ನ ತಿಕ್ಕತ್ತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ.

ನಾಯಿಮೂಳೆ, ನರಿದ್ರಾಕ್ಷಿ ಕತೆ
ಬಾರಲೆ ಹಕ್ಕಿ, ನಾಯಿ ಮರಿ ತಿಂಡಿಬೇಕಾ
ಸೋಮಣ್ಣ ಗೌಡ್ರ ನಾಯಿ ಪಾಠ
ಒಂದೊಂದೆ ನಂಗೆ ಈಗ ಗ್ಯಾನಾದೆ

ಸ್ಕೂಟ್ರು ಜೀಪು ಒಮ್ಮೊಮ್ಮೆ ಕೆಳಗೆ ದಾರಿಲಿ ಓಡಾಡ್ತಿದ್ದದ್
ಯಾಗಾರ ಒಮ್ಮೆ ಯಿಮಾನ ಆಕಾಶಲಿ ಹಾರ್ತಿದ್ದದ್
ಆಗ ಕೂಗು ಹಾಕಿ ನಾವೆಲ್ಲಾ ಟಾಟಾ ಮಾಡ್ತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ.

ಚಿಣಿದಾಂಡ್, ಕಬಡಿ ಕಬಡಿ ಚಂಡ್ ಆಡ್ತಿದ್ದದ್
ಹೊಟ್ಟೆ ಹಾಕಿ ಗೋಲಿ ಹೊಡೆತಿದ್ದದ್
ಭೂತಾಳಿ ಹುರಿ ಹಗ್ಗ ಮಾಡಿ ಬುಗುರಿ ಬುಡ್ತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ

ಕಳ್ಳ ಪೋಲಿಸ್, ಲಗೋರಿ, ಬೆರ್ಸುವ ಆಟ
ಕುಂಟೆಬಿಲ್ಲೆ, ಚಿಲ್‌ಕಿ ಲಗೋರಿ ಆಟ
ಉಪ್ಪು ಮೂಟೆ, ಗಾಡಿ ಹೊಡ್ದ್ ಓಡುವಾಟ
ಒಂದೊಂದೆ ನಂಗೆ ಈಗ ಗ್ಯಾನಾದೆ

ಇಪ್ಪುಲಿ, ರಂಜಳ, ಕರ್ಮಜ ಹಣ್ಣ್
ಹಾಲೆ, ಹುಣ್ಸುಳಿ, ಮಾಯನ ಕಾಯಿ
ಬಡಿಗೆಲಿ ಬಡ್‌ಚ ಜೋಬುಲಿ ತುರ್ಕ್‌ತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ

ಹಲ್ಸನ ಹಣ್ಣ್‌ದ್ ಕೂಗಲೆ ಹಿಟ್ಟ್
ಪತ್ರ್ ಒಡೆ, ಬಾಳೆಹಣ್ಣ್ ಕಜಾಯ, ಸೂಸಲೆ ಹಿಟ್ಟ್

ಹಲ್ಸನಕ್ಕಿ ಪೊಜ್ಜಿ ಪೊಕ್ಕಳ ರೊಟ್ಟಿ
ಒಂದೊಂದೆ ನಂಗೆ ಈಗ ಗ್ಯಾನಾದೆ.
ನಾಯಿ ಮರಿ ಅಳುಂಬುಗೆ ಉಪ್ಪು ಹಾಕಿ ಸುಟ್ಟದ್
ಎಸಂಡ್ ಒಲೆಗೆ ಹಾಕ್‌ಕಾಕನ ಕರ್‌ಂಟ್ ಬಾತಿದ್ದದ್
ಕೊಟ್ಟು ಮುಡುಚ ಹಕ್ಕಿಗೆ ಉಪ್ಪು ಮೆಣಸ್ ಹಾಕಿ ಸುಟ್ಟ್ ತಿಂದದ್
ಒಂದೊಂದೆ ನಂಗೆ ಈಗ ಗ್ಯಾನಾದೆ.
ಡೋಂಟ್ರ್ ಕಪ್ಪೆನ ಕೊಂದ್ ಕಪ್ಪೆಕೋಲ್ ಹಾಕಿದ್
ಎಸಂಡ್ ಕೊಂಬ್‌ಲಿ ಕೈಗೆ ಅಂಬ್ರುಸಿದ್
ಮಾಟೆ ಒಳಗೆಂದ ಮೊರ್‌ಟೆ ಮೀನ್ ಎಳ್ದ್ ನೆಲಕೆ ಬಡ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ
ಹಲ್ಸನ ಮರಲಿದ್ದ ಕುಂಡತಕ್ಕೆ ಕಲ್ಲ್ ಹೊಡ್ದದ್
ಕಿರ್ ಕೋಳಿನ ಸಿಡಿಹಾಕಿ ಹಿಡಿಯತ್ತಿದ್ದದ್
ತೋಡ್‌ಲಿ ಚರಂಗ್ ಮೀನ್‌ನ ಪಚ್ಚೆಲಿ ಗೊಂಚ್‌ತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ
ಪೇರ್ಲಕಾಯಿ, ಚೋಳಿಕಾಯಿ, ಪೊಪ್ಪಾಯಿಂದ ಹೊಟ್ಟೆ ತುಂಬ್‌ತ್ತಿದ್ದದ್
ಹುಳಿಚೊಲ್ಲಿ ತೋಳೆಬುಡ್ಸಿ ಉಪ್ಪು ಸಣ್ಣ್‌ಮೆಣ್ಸ್ ಹಾಕ್‌ತಿದ್ದದ್
ನೀರ್ ಆಂಬರ, ಮಾಯನ ಹಣ್ಣ್ ಚಂಡ್ರಪುಳಿ
ಒಂದೊಂದೆ ನಂಗೆ ಈಗ ಗ್ಯಾನಾದೆ.
ಬೆಳ್‌ಜ್‌ರ ಅಳುಂಬು ಹೆಗ್ಗ್‌ಳಳಂಬು ಹುಡ್ಕುತಿದ್ದದ್
ಕಲ್ಲ್ ಮಗ್‌ಚಿ ಎಸಂಡ್ ಹಿಡಿತಿದ್ದದ್
ಮುಜೆಂಟಿ, ಕೋಲ್ ಜೇನ್ ತಿಂದ್ ತಲೆಗೆ ತಿಕ್ಕಿದ್
ಒಂದೊಂದೆ ನಂಗೆ ಈಗ ಗ್ಯಾನಾದೆ.
ಸಾಯಂಕಾಲ ಬಂದಂಗೆ ಒಣ್‌ಗಿಲ್ ರೊಟ್ಟಿಗೆ ಜಗಳ ಆಡ್ತಿದ್ದದ್
ತರಕಾರಿ ತೋಟಂದ ಸೋಂತೆಕಾಯಿ ಕದ್ದ್ ತಿಂಬತಿದ್ದದ್
ಅಕ್ಕಿ ಗೆಣ್ಸ್, ಚೀನ ಗೆಣ್ಸ್ ಕಾಡ್‌ಂದ ಎಳ್ಳಿ ತಾತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ.
ಆಲದ ಮರದ ಬುಡಲಿ ಸತ್ಯ ನಾರಾಯಣ ಪೂಜೆ ಮಾಡ್ತಿದ್ದದ್
ಕೊಡೆಕಲ್ಲ್ ಗಣಪತಿ ಮಾವಂಗೆ ದೇವುರು ಬರ್ತಿದ್ದದ್

ಪ್ರಸಾದ ತಿಂದ್ ನೈವೇದ್ಯ ಕುಡ್ದದರ್ನ ಚೆಡ್ಡಿಗೆ ತಿಕ್ಕಿದ್
ಒಂದೊಂದೆ ನಂಗೆ ಈಗ ಗ್ಯಾನಾದೆ.

ಶಿವರಾತ್ರಿ ಹಬ್ಬಲಿ ದನದ ತಟ್ಟೆಕಟ್ಟಿ ಕುಣಿಯುತ್ತಿದ್ದದ್
ಹುತ್ತರಿ ಹಬ್ಬಲಿ ಕಾಪಳ ಕಾಂಬಕನ ಓಡ್ತಿದ್ದದ್.
ಕಿಡ್ದಾಸ ಹಬ್ಬಲಿ ಮೂಳೆ ಗಟ್ಟಿಯಾದೆತ ಕೋಳಿ ಮಾಸ ತಿಂದದ್
ಒಂದೊಂದೆ ನಂಗೆ ಈಗ ಗ್ಯಾನಾದೆ.

ಹಂದಿಗೆ ಮರ್ಗಿಲ್‌ಲಿ ಗಂಜಿ ಹೊಯ್ದ್ ಕುಟ್ಟಿ ಬಾತ ಕರೆತಿದ್ದದ್.
ಕುದುಕ ಹೂಂಜ ಕೋಳಿನ ಹೊತ್ತ್‌ಕಂಡ್ ಹೋತಿದ್ದದ್
ಟಾಮು, ಟೈಗಾ ಕರಿಯಾ ನಾಯಿನ ಬುಟ್ಟ್ ಚೂ ಕೂಡ್ತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ

ಹಂದಿ ಸುಡಿಕೆ ಹುಲ್ಲು ಕಂತೆ ಹೊತ್ತ್‌ಕಂಡ್ ಬಾತಿದ್ದದ್
ಅಪ್ಪ ಕೋಳಿನ ಕುತ್ತಿಗೆ ಮುರ್ದ್ ಅಚ್ಚ್‌ಕಟ್ಟ್ ಮಾಡ್ತಿದ್ದದ್
ಆಲ್‌ಗೆಂಡೆ, ಲಾತ್‌ಕಾಳ್ ಹಾಕಿ ಅವ್ವ ಕೋಳಿ ಮೊಟ್ಟೆ ಸಾರ್ ಮಾಡ್ದ
ಒಂದೊಂದೆ ನಂಗೆ ಈಗ ಗ್ಯಾನಾದೆ.

ನಾಟಿ ಗದ್ದೆಲೆ ನಾಟಿ ಮಾಡವು ಹೊಯ್ಯೋ ಹಾಕ್‌ತಿದ್ದದ್
ಓಡಿ ಮುಂದೆ ಬಂದವುಕೆ ಬಾಳೆಗೊನೆ, ಕಾಯಿ ಕೊಡ್ತಿದ್ದದ್
ಹಲ್ಸಿನಕ್ಕಿ, ಹೊದ್ರಿ, ಬಾಳೆಹಣ್ಣ್ ಕಾಯಿ ಹೋಳ್ ತಿಂದಟ್
ಒಂದೊಂದೆ ನಂಗೆ ಈಗ ಗ್ಯಾನಾದೆ.

ಬಾಣೆಲಿ ಕೇರೆ, ಕಾಟಿಮುರ್ಕ ಹಾವು ಎಣೆ ತೆಗೆತಿದ್ದದ್
ಸತ್ತ ದನ ತಿಂಬಕೆ ಗದ್ದೆಲಿ ಹದ್ದ್‌ಗಳ ಓಂಡ್ ಬಾತಿದ್ದದ್
ಕೋಳಿ ಪಿಳ್ಳೆಗಳನ್ನ ಕಾಗೆ, ಕೀರಿ ಹೊರಿಕೆ ಬಾತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ

ಕಟ್ಲ್ ಅಡಿಲಿ ಅಡ್‌ಂಗಿ ಕುದ್ದವರ್ನ ಹುಡ್‌ಕ್‌ತಿದ್ದದ್
ಕತ್ತಲೆ ಕೊಂಬರೆಲಿ ಗುಮ್ಮ ಆಟ ಆಡ್ತಿದ್ದದ್
ಅಟ್ಟಂದ ಬಾಳೆಹಣ್ಣ್ ಮುರ್ದ್ ತಿಂಬತ್ತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ.

ಚಾಂಪನ ಸಾವುಲಿ ನೆಕ್ಕಿ ಸೊಪ್ಪು ಮುರ್ಕಂಡ್ ಬಂದದ್
ನೀರ್ ನೆರಳ್ ಮಡಿಗಿದಲ್ಲಿ ಚಾಮೆವ್ವನ ಕೊಲೆ ಬಂದದ್

ಹೆಣ ನೋಡಿ ರಾತ್ರಿ ಇಡೀ ನಿದ್ರೆ ಮಾಡದೆ ಒದ್ದಾಡ್ದ್
ಒಂದೊಂದೆ ನಂಗೆ ಈಗ ಗ್ಯಾನಾದೆ.
ಚೊಂಬುಲಿ ನೀರ್ ತಕಂಡ್ ತೋಟಕೆ ಓಡ್ತಿದ್ದದ್
ಓದಿಕಾದೆತ ಸುಮಾರ್ ಹೊತ್ತ್ ಅಲ್ಲೆ ಕೂರ್ತಿದ್ದದ್
ಹಿಂದೆದ ಹಂದಿಬಂದ್ ಉಂದಿ ಹಾಕಿದ್
ಒಂದೊಂದೆ ನಂಗೆ ಈಗ ಗ್ಯಾನಾದೆ.
ಬೀರಿ ಹಿಡ್ದ್ ಕಾಲಿ ಬೆಂಕಿಪಟ್ಟಿ ಒಳಗೆ ಹಾಕ್ತಿದ್ದದ್
ಜೇನ್ ನೊಣಕ್ಕೆ ನೂಲ್‌ಕಟ್ಟಿ ಮೇಲಕ್ಕೆ ಹಾರ್‍ಸ್ತಿದ್ದದ್
ಬೆಂಞಣ ಗೂಡಿಗೆ ಕಲ್ಲ್ ಹೊಡ್ದ್ ಓಡ್ತಿದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ
ಸಣ್ಣ ಮಕ್ಕಳ ಕೊಡೆಗೆ ಉರ್‍ಕೊಳಿ ಮಕ್ಕ ಗುನ್ನ ಹಾಕ್ತಿದ್ದದ್
ಹೆಣ್ಣ್ ಮಕ್ಕಳ ಲಂಗಕ್ಕೆ ಪೋಲಿಮಕ್ಕ ಕೆಸ್ರ್ ಹಾರ್‍ಸ್ತಿದ್ದ್
ನೀರ್‌ಲಿ ಆಟ ಆಡ್ದಕ್ಕೆ ಸೀತ, ಚಳಿಜ್ವರ ಬಂದದ್
ಒಂದೊಂದೆ ನಂಗೆ ಈಗ ಗ್ಯಾನಾದೆ.
ಪೆಬ್ಬುಲಿ ಕಾಡ್, ದೊಡ್ಡಕಾಡ್ ದೇವುರ ಕಾಡ್ ಇದ್ದದ್
ಎಲ್ಲವೂ ಗದ್ದೆ ಹೂಡಿ, ಬೀಜ ಹಾಕಿ, ನಾಟಿ ಮಾಡ್ತಿದ್ದ್
ಹಿರಿಯವರ ಮೇಲೆ ಕಿರಿಯವುಕೆ ಭಯ ಭಕ್ತಿ ಇದ್ದದ್
ಒಂದೊಂದೆ ನಂಗೆ ಈಗ ಗ್ಯಾನಾದೆ....
ಒಂದೊಂದೆ ನಂಗೆ ಈಗ ಗ್ಯಾನಾದೆ...
....... ಒಂದೊಂದೆ ನಂಗೆ ಈಗ ಗ್ಯಾನಾದೆ.

**✍ ತೆಕ್ಕಡ ಬಿ. ಕುಮಾರ ಸ್ವಾಮಿ**

# ಅರೆಬಾಸೆನ ಮಳೆ

ಮಳೆ ಬುಟ್ಟು ಸೂರಡಿಲಿ ಹನಿ ಹನ್ಕಿದೆ..
ಹೊಯ್ದುದದ್ ಇಂದಲ್ಲ ಬಾರಿ ಪಂಡ್‌ಲೇ
ಮಡ್ಕೆ ಗಡ್ಗೆನ ಇಸಿದ್ ಹನಿ ತುಂಬುವೆ..
ಏನ್ಮಾಡ್ದು ಸುಖ ಇಲ್ಲೆ ನೀರೂಜಿದೆ..
।ಮಳೆ ಬುಟ್ಟು ॥೧॥

ಸಂಸಾರ ಸಮ್ಮಂದ ಅದ್ ಬೊರಿ ಲೊಟ್ಟೆಯ
ಪಂಡ್ ತಿಂದುಂಡದ್ ಕೂಡ್ಯಾಡ್ದ್ ಎಲ್ಲ ಮರ್ತಲೇ....
ಇಂದ್ ಒಬ್ಬೊಂಗು ಬುದ್ದಿಲ್ಲೆ ಐಸುರಲಿ ತಲೆ ಕೆಟ್ಟ್ ಯಾ
ಮತ್ತೇಂಗೆ ತುಂಬುಸುದ್ ಈ ದಬ್ಬೆ ಮಡ್ಕೆಲೇ..
ಮಳೆ ಬುಟ್ಟು ॥೨॥

ಗಡ್ಗೆ ಮಡ್ಕೆ ಕೆಡ್ಗಿಕೆ ಒಸಿ ಜನ ಕಾದವೆ
ಮತ್ಯಾರಲ್ಲ ಜನಗ ನಮ್ಮೊವು ಮತ್ತು ನೆರೆಕರೆವೇ
ಮನೆಗೆ ಕಿಚ್ಚಿಬಿದ್ದೊರು ಅವು ಅದರ್ಲೇ ಚೆಳಿ ಕಾಸೊವೆ..!
ಬೇರೇನ್ ಪಣಿ ಇಲ್ಲೆ ಜಾತಿ, ಬಾಸೆಗಳ ನೊಡುಲಿ
ದಿನ ವಿಸ ಕಕ್ಕೊವೇ
ಮಳೆ ಬುಟ್ಟು ॥೩॥



ಎಲ್ಲವು ಎದ್ದ್ ಕುದ್ರಿ
ಕುಂಡೆಡಿಗೆ ನೀರ್ ಬಾತ್ ಯ..!
ಎಲ್ಲ್ಯಾದ್ ಒಟ್ಟೇಂತ
ನೀವೆ ಹುಡ್ಕಿಯ...॥
ಮಡ್ಕೆನನೆ ಕಂಕ್ಣಿಹಾಕಿ ನೋಡಿ
ನೀವ್ಗೆ ಪುರ್ಸೊತ್ತಾದರೆ...!!!
ಅಕೇರಿಗೆ ಬಿರ್ಕ್ ಎಲ್ಲೀಂತ
ನೀವ್ಗೆ ಗೊತ್ತಾದರೆ..!!!!
ಮತ್ತೆ ಸೆರಿಯಾದು ಮಡ್ಕೆ
ಎಲ್ಲೊವು ಸೇರಿ ಬೆಸ್ಗೆ ಹಾಕಿರೆ..!!!!
ಮಳೆ ಬುಟ್ಟು ॥೪॥

ಮಳೆ ಬುಟ್ಟು ಸೂರಡಿಲಿ ಹನಿ ಹನ್ಕಿದೆ..
ಇಂದಲ್ಲರ್ ನಾಳೆಂತು ಸಂಮ್ಮಂದ ಕೈಂತದೆ...

✍ಕಾರ್ತಿ ಪದೇಲ

# ಬುಡೋಕು ಹಗೆತನ

ಹಗೆಕಾರಿ ಬೆನ್ನು ಹಾಕಿ ಅಂವ ಹೋವ್ಟು
ನಾ ಹೋಗಿ ಮಾತಾಡ್ಸೋಕು
ಯಾರ್ಗೆ ಗೊತ್ತುಟ್ಟು!
ನಾಳೆ ನಾ ಸಾಯಕನ
ನನ್ನ ಹೊರಿಕೆ ಅವನು ಹೆಗ್ಲ್ ಕೊಡ್ದು
ನಿನ್ನೆ ನನ್ನೊಟ್ಟಿಗೆ ಜಗಳ ಆಡಿ
ಮಾತು ಬುಟ್ಟ ತಂಗೆಗೆ
ಒಂದ್ಜೂರು ಪ್ರೀತಿ ಕೊಡೊಕು
ಯಾರಿಗೆ ಗೊತ್ತುಟ್ಟು!
ಅಂಗಾತ ಬಿದ್ದ ದೇಹದ ಮೇಲೆ
ಅವಳು ಹೊರಳಾಡ್ತ ಇರ್ದು
ಬಟ್ಟೆ ಒಳ್ಳೆದಿಲ್ಲೆಂತ ಅಂಗಡಿಯವಂಗೆ
ನಿನ್ನೆ ಬೊಯ್ದು ಬಂದಿದ್ದೆ
ಒಮ್ಮೆ ಹೋಗಿ ಕ್ಷಮೆ ಕೇಳೋಕು
ಯಾರಿಗೆ ಗೊತ್ತುಟ್ಟು!
ನಾಳೆ ನನ್ನ ಮೇಲೆ ಹೊದುಸುವ ಬಟ್ಟೆ
ಅವನ ಅಂಗಡಿದೆ ಆಗಿರ್ದು
ನನ್ನ ತೋಟಕ್ಕೆ ದನ ಬುಟ್ಟು
ಹಾಳ್ ಮಾಡ್ತ್‌ತ ನೆರೆಮನೆಯವನೊಟ್ಟಿಗೆ
ಜಗಳ ಕಾರಿದ್ದೆ
ಅವನ ಮನೆಗೊಮ್ಮೆ ಹೋಕು
ಯಾರಿಗೆ ಗೊತ್ತುಟ್ಟು!
ನಾಳೆ ಬಳ್ಸುವ ಸಾಲಲಿ ಅವನು ನಿಂತಿರ್ದು
ಇರುವ ಮೂರು ದಿನದ ಬದ್ಕಲಿ
ಹಳ್ಸಲ್ ಹಗೆನ ಸಾಧುಸುದು ಯಾಕೆ?
ಸತ್ತ್ ಹೋದ ಮೇಲೆ ಎಲ್ಲವೂ ಆದು ಬೂದಿನೇ
ಇರ್ಕನ ಮುಟ್ಟ ಪ್ರೀತಿ ಕೊಟ್ಟು
ಒಳ್ಳೆತನಲಿ ನಾವು ಬಾಳೋಕು

✍ ಅಪೂರ್ವ ಕೊಲ್ಯ

# ನೀ.....



ಕಡಲ್ ನೀ...
ಭೋರ್ಗರ್ದ್ ಸಿಡ್ದ್
ಹಾಲ್ನೊರೆಗೈದ್ ನಿನ್ನ ಕಾಯುವ ಶಾಂತ ಅಲೆ ನಾ..
ಭೂಮಿ ನೀ...
ನೀಲಿ ಬಾನ್ಲಿ ಕತ್ತಲಾಗಿ
ಗುಡ್‌ಗ್ ಮಿಂಚಿಗೆ
ಚದ್ರಿ ಹನಿಯಾಗಿ
ನಿನ್ನೊಳಗೆ ಲೀನಾ ಆದ ಬಾನ್ ನಾ..
ಸಾಗರ ನೀ..
ಹಾರಿ ಕುಣ್ದ್ ದುಮ್ಕಿ ಹರ್ದ್
ನಿನ್ನ ಸೇರಿಕೆ
ಓಡಿ ಬರ್ವ ನದಿ ನಾ....
ಅವ್ವ ನೀ..
ಅತ್ ಕರ್ದ್ ರಚ್ಚೆ ಹಿಡ್ದ್
ನಿನ್ನ ಮಡಿಲ್ಲಿ
ಜಗವ ಮರ್ತ ಕೂಸು ನಾ...

✍ವಂದನಾ ಜಿ.

ಕಥನ ಕಾವ್ಯ

# ನಮ್ಮೂರ್ನ ಗದ್ದೆಗೋರಿ

ತುಂಬಾ ವರ್ಷದ ಹಿಂದೆ ನಮ್ಮೂರ್ಲಿ ಅಡಿಕೆ ತೋಟ ಕಮ್ಮಿತ್ತ್
ಎಲ್ಲಿ ನೋಡಿರೂ ಗದ್ದೆಗಳ್‌ಂದ ಕೂಡ್ದ ಬೈಲ್ ಪ್ರದೇಶನೆ ಕಾಂಬೊತ್ತಿತ್ತ್
ನೋಡ್ಕನ ಪಚ್ಚೆ ಪೈರ್‌ಂದ್ ಕಾಂಬೊತ್ತಿತ್ತ್, ಮನ್ಸಿಗೆ ಕುಸಿ ಆತಿತ್ತ್
ಆಗನ ರೈತರ್ ಬೇಸಾಯ ಕಾಲಲಿ ಗದ್ದೆಗೋರಿನ ಮಾಡ್ತಿದ್ದೊ

ಬೇಶೆ ತಿಂಗಳ್‌ಲಿ ಗದ್ದೆನ ಹೂಡಿ ಗದ್ದೆಲಿ ಬತ್ತನ ಬಿತ್ತ್‌ತ್ತಿದ್ದೊ
ಆ ನೇಜಿನ ಮುಂದೆನ ಕಾರ್ತಿಂಗಳ್ಲಿ ಗದ್ದೆಲಿ ನಾಟಿ ಮಾಡ್ತಿದ್ದೊ
ಗದ್ದೆನ ಹೂಡ್ದು, ನೇಜಿನ ನೆಡ್ದು ಅಲ್ಲಲ್ಲಿ ಬೈಲ್‌ಲಿ ಕಾಂಬೊತ್ತಿತ್ತ್
ಕೆಲ್ಸದ ಅವ್ಸರ ಇದ್ದರೂ ಆಗ ಎಲ್ಲರ ಮನ್ಸಿಲಿ ಕುಸಿ ತುಂಬಿತ್ತ್



ಬೊಳ್ಪಿಗೆ ಕೋಳಿ ಕೂಂಗುವ ಹೊತ್ತಿಗೆ ಅಪ್ಪಂಗೆ ಎಚ್ಚರ ಆತಿತ್ತ್
ಎಲಡ್ಕೆ ತಿಂದ್ ಹಟ್ಟಿಗೆ ಹೋಗಿ ಎತ್ತ್‌ಗಳ್ಗೆ ಮೊಡ್ಡಿ ಇಸ್ತಿದ್ದೊ
ಮೊಡ್ಡಿ ತಿಂದ್ ಮುಗ್ದ ಮೇಲೆ ಹುಲ್ಲೋ. ಬಿಳ್ಗಿಲೋ ಹಾಕ್ತಿದ್ದೊ
ಮನೆಗೆ ಬಂದ್ ನಮ್ಮನ ಕರ್ದ್ ಒಟ್ಟಿಗೆ ಬಾಕೆ ಹೇಳ್ತಿದ್ದೊ.

ನಾವು ಕೂಡ ಎತ್ತ್‌ಗಳ ಹೊಡ್ಕಂಡ್ ಕುಸೀಲಿ ಗದ್ದೆಗೆ ಹೋತಿದ್ದೊ
ಮುಂದೆನೆ ಕೇಳಿಕನ ಒಪ್ಪಿದ ಮನೇವು ಗದ್ದೆಗೋರಿಕೆ ಎತ್ತ್‌ಗಳ ತಾತಿದ್ದೊ.
ಅವರವರ ಎತ್ತ್‌ಗಳ ಕುತ್ತಿಗೆಗೆ ಎಲ್ಲವೂ ನೊಗ ನೇಗಿಲ್ ಕಟ್ಟಿದ್ದೊ
ಗದ್ದೆ ಗೋರುವ ಆ ದಿನ ನಾವು ಶಾಲೆಗೆ ಚಕ್ಕರ್ ಹೊಡಿತ್ತಿದ್ದೊ, ಕೆಲ್ಸಲಿ ಸಹಾಯ ಮಾಡ್ತಿದ್ದೊ.

ಲಾಯ್ಕ್ ಹೂಡೊವನ ಒಳ್ಳ ಎತ್ತ್‌ಗ ಎಲ್ಲದರ್‌ಂದ ಮುಂದೆ ಹೋತಿದ್ದೊ
ಉಳ್ದ ಎಲ್ಲವು ಅವರವರ ಎತ್ತ್‌ಗಳ ಸರತಿಲಿ ಹಿಂದೆಂದ ಹೊಡೆತ್ತಿದ್ದೊ
ಬಾರೀ ಕುಸೀಲಿ, ಎಲ್ಲವು ಶಿಸ್ತ್‌ಲಿ ಅವರ್ದೆ ಗದ್ದೇಂತ ಹೂಡ್ತಿದ್ದೊ.
ಒಬ್ಬನೊಟ್ಟಿಗೆ ಮತ್ತೊಬ್ಬನ ಹಾಂಗೆ ರಾಗಲಿ ದನಿ ಕೊಡ್ತಿದ್ದೊ ॥

ಹೂಡುವ ಎಡೇಲಿ ಒಸಿ ಹೊತ್ತು ನಿಲ್ಸಿ ಒಟ್ಟಿಗೆ ಕಾಫಿ ಕುಡೇಕೆ ಹೋಗ್ತಿದ್ದೊ
ಮಧ್ಯಾಹ್ನದೊರೆಗೆ ಗದ್ದೆನಿಡೀ ಹೂಡಿ ಗದ್ದೆಗೋರಿನ ಮುಗ್‌ಸ್ತಿದ್ದೊ
ಹೂಡ್ಯಾದ ಮೇಲೆ ಎತ್ತ್‌ಗಳ ಹೊಡ್ಕಂಡ್ ಹಳ್ಳಕೋ, ಚೋಡಿಗೋ ಹೋಗ್ತಿದ್ದೊ
ಎತ್ತ್‌ಗಳ ತೊಳ್ದ್, ಅವುನೂ ಮೀದ್ ಮೇಯಕೆ ಎತ್ತ್‌ಗಳ ಬುಡ್ತಿದ್ದೊ ॥

ಮದ್ಯಾಹ್ನ ಎಲ್ಲವು ಗದ್ದೆವನ ಮನೆಗೆ ಒಟ್ಟಿಗೆ ಊಟಕೆ ಹೋಗ್ತಿದ್ದೊ
ಹಸಿವಿನ ನಡುಲಿಯೂ ಊರ್‍ನ ವಿಷಯ ಮಾತಾಡ್ಕಂಡ್ ಹೊಟ್ಟೆ ತುಂಬ ಉಂಬೊತ್ತಿದ್ದೊ
ನಾವುನೂ ಕೂಡ ಒಟ್ಟಿಗೆ ಕುದ್ದ್ ಬಾಳ್ಲೆಲಿ ಊಟ ಮಾಡ್ತಿದ್ದೊ
ಅವ್ವನು ಕೂಡಾ ಹುಗ್ಗ, ಗೈಪುನ ತಕ್ಕಂಡ್ ಉಣಿ ಉಣಿಂತೇಳಿ ಇಕ್ತಿದ್ದೊ ॥

ಹೂಡ್ಯಾದ ಹಾಂಗೇ ಹೆಳ್ಮಕ್ಕ, ಗಳ್ಮಕ್ಕ ಎಲ್ಲವು ಸೇರಿ ಗದ್ದೆಲಿ ನೇಜಿ ನೆಡ್ತಿದ್ದೊ
ರಾಗಲಿ ಹಾಡುವ ಹೆಳ್ಮಕ್ಕ ನೇಜಿ ಪದ್ಯ ಹೇಳ್ತಿದ್ದೊ, ಗಳ್ಮಕ್ಕ ಒಟ್ಟಿಗೆ ಹಾಡ್ತಿದ್ದೊ.
ಮಂಜಟಿಗೋಣ, ದೂಜಿ ಕೆಮ್ಮಾಯ್ರದಂತ ತರತರ ಪದ್ಯ ಹೇಳ್ತಿದ್ದೊ.
ಪದ್ಯಕೆ ಸರ್‍ಯಾಗಿ ಗಳ್ಮಕ್ಕ ಓಡಿ ಮೈಮೇಲೆ ಚೋಳ್ ರಟ್‌ಸ್ತಿದ್ದೊ, ಕುಸಿ ಪಡ್ತಿದ್ದೊ॥

ಎಲ್ಲವೂ ಸೇರಿ ನೇಜಿನ ನೆಟ್ಟ್ ಹಿಂಬೊತು ಕೆಲ್ಸ ನಿಲ್‌ಸ್ತಿದ್ದೊ
ಒಳ್ದರೆ ಮಾರ್ಣೆ ದಿನ ಬಂದ್ ಒಳ್ದ ನೇಜಿನ ನೆಡ್ತಿದ್ದೊ, ಇಲ್ಲರೆ ಬೇರೆ ಕಡೆ ಕೆಲ್ಸಕೆ ಹೋಗ್ತಿದ್ದೊ
ಆಗನ ಕಾಲಲಿ ನೆರೆಕರೆವೆಲ್ಲ ಕೂಡಿಕಂಡ್ ನೇಜಿ ಕೆಲ್ಸ ಮಾಡ್ತಿದ್ದೊ. ಸಂಬಳದ ಜನ ಕೂಡ ಬರ್‍ತಿದ್ದೊ.
ಕಷ್ಟ ಸುಖಲಿ, ಕೆಲಸ ಕಾರ್‍ಯಲಿ ಆಚೀಚೆ ಸಹಾಯ ಮಾಡ್ತಿದ್ದೊ, ಕಷ್ಟಲೂ ಸುಖನ ಕಾಂಬೊತ್ತಿದ್ದೊ॥

✍ ಮಾಧವ ಗೌಡ ಮಡಪ್ಪಾಡಿ

## ಲೇಖನ

# ಕಾಲ

ನಾವು 'ಕಾಲ' ಅಂತ ಹೇಳಿವೆ ಅಲ್ಲ, ಈ ಕಾಲ ಅಂದರೆ ಏನ್? ಈ ಪ್ರಶ್ನೆಗೆ ಕೊಡುವ ಸರಳ ಉತ್ತರ ಅಂದರೆ ಗಡಿಯಾರ ತೋರ್ರುದೇ 'ಕಾಲ' ಅಂತ.

ಹಾಂಗಾದರೆ ಪ್ರಪಂಚದ ಎಲ್ಲ ಗಡಿಯಾರಗಳ ಒಮ್ಮೆಗೆ ನಿಲ್ರೊನ. ಆಗ ಏನಾದು? ಸೂರ್ಯ ಮೂಡ್ದೆ ಅಲ್ಲ! ಗೊತ್ತಿದ್ದೊ ಗೊತ್ತಿಲ್ಲದನೋ ಯಾರಾದ್‌ರ್ ಈ ಉತ್ತರ ಹೇಳಿರೆ ಅದ್ ನಿಜವಾದ ಮಾತಾದೆ. ಎಲ್ಲ ಗಡಿಯಾರಗ ಮಾಡುವ ಕೆಲ್ಸ ಏನ್? ಸೂರ್ಯನ ಸರಿತನ ಯಾ ಚಲನೆನ ಅಳೆವ ಕೆಲ್ಸ. ಹಾಗಂತೇಳಿರೆ ಸೂರ್ಯ ಮುಳ್ಗಿತ್‌ಂತ ಹೇಳಿವೆ. ನಿನ್ನೆನೂ ಹೀಂಗೆ ಆಗುಟು. ನಾಳೆನೂ ಹೀಂಗೆ ಆದೆಂತ ಊಹಿಸುವೆ. ಆಗ ಕಾಲತೇಳಿರೆ ಏನ್?

ಕಾಲ ಅಂದರೆ ಬದಲಾವಣೆ. ಇಂದ್ ನಿನ್ನೆನ ಹಾಂಗೆ ಇದ್ದದೆ ನಿಜ. ಆದರೆ ಪೂರ ಹಾಂಗೆನೆ ಇದ್ದದೆನೊ? ನಿನ್ನೆ ಈ ಹೊತ್ತಿಗೆ ಬಿಸ್‌ಲ್ ಇತ್ತ್. ಇಂದ್ ಮೋಡ ಉಟ್ಟು. ಓ ಅಂದ್ ಚಳಿ ಇತ್ತ್. ಈಗ ತುಂಬಾ ಸೆಕೆ ಆದೆ. ನಿನ್ನೆ ಇದ್ದ ಎಷ್ಟೊ ಜನ ಇಂದ್ ತೀರಿ ಹೋಗೊಳೊ. ನಿನ್ನೆ ಇಲ್ಲದೊವ್ ಇಂದ್ ಹುಟ್ಟಿ ಕಣ್ಣ್ ಬುಟ್ಟೋಳೊ. ನಮ್ಮ ಪ್ರಾಯ ನಿನ್ನೆಗಿಂತ ಇಂದ್ ಜಾಸ್ತಿ ಆಗುಟ್. ಹಾಂಗಾಗಿ ಕಾಲ ಅಂದರೆ ಏನ್? ಕಾಲ ಅಂದರೆ ಬದಲಾವಣೆ. ಇದರಿಂದಾಗಿ ಕಾಲನ ನಾವ್ಗೆ ತಿಳ್ಕಂಬಕೆ ಆದೆ.

ಕಾಲ ಅಂದರೆ ಹೊತ್ತು, ಸಮಯ, ಹೀಂಗೆಲ್ಲಾ ಹೇಳುವೆ. ಕಾಲ ಎಂಬ ಪದಕ್ಕೆ 'ಯಮ' ಅಂತಲೂ ಹೇಳುವ ಕ್ರಮ ಉಟ್ಟು. ಕಾಲದ ದೂತರ್ ಬಂದ್ ಅವನ ಪ್ರಾಣ ತಕಂಡ್ ಹೋದ್ರೋ. ಕಾಲ ಬಾತ್ ಜೀವ ಹೋತ್. ಸಾಯುವ ಕಾಲ – ಸಮಯ ಬಾತ್‌ಂತ ನಾವ್ ತಿಳ್ಕಂಡವೆ.

'ಯಮ' ಯಾರ್? ಯಮಲೋಕದ ಯಜಮಾನ. ಅಷ್ಟ ದಿಕ್ಪಾಲಕರಲ್ಲಿ ಒಬ್ಬ. ಇವನ ಗುಮಾಸ್ತನೇ 'ಚಿತ್ರ ಗುಪ್ತ'. ಮನುಷ್ಯರ ಪಾಪ ಪುಣ್ಯಗಳ ಲೆಕ್ಕ ಇಸಿಕಂಡ್ ಯಮಂಗೆ ವರದಿ ಮಾಡಂವ. ಅದರ ಮೇಲೆ ಶಿಕ್ಷೆ, ಸಮ್ಮಾನ ಎಲ್ಲ. ಇದ್ ನಮ್ಮ ಪೌರಾಣಿಕ ನಂಬಿಕೆ. ಆದರೆ ಇದರ್ಲಿ 'ಮನಶಾಸ್ತ್ರ' ಉಟ್ಟು; ಮನಸ್ಸಿನ ಲೆಕ್ಕಾಚಾರ ಉಟ್ಟು. ಇಲ್ಲಿ ಹಂಞ ಯೋಚನ ಮಾಡಿಕೆ ಉಟ್ಟು. ಚಿತ್ರಗುಪ್ತ ಅಂದರೆ ಅಡಗಿರುವ, ಗುಟ್ಟಾಗಿರುವ ಚಿತ್ರ. ನಮ್ಮ ಅನುಭವಗೆಲ್ಲ ಚಿತ್ರರೂಪಲಿ, ನಮ್ಮ ಮೆದುಳ್‌ಲಿ ರೆಕಾರ್ಡ್ ಆದೆ ಗಡ. ನಮ್ಮ ಕಣ್ಣ್ ಹೇಂಗೆ ಒಂದು ವಳ್ಳ

ಕೆಮರನೋ ಹಾಂಗೆ ನಮ್ಮ ಮೆದುಳು ಒಂದು ವಳ್ಳ ಟೇಪ್ ರೆಕಾರ್ಡ್ರ್. ನಮ್ಮ ಮನ ಶಾಸ್ತ್ರಜ್ಞರ್ ಪ್ರಯೋಗ ಮಾಡಿ ಕಂಡ್‌ಕಂಡ ಸತ್ಯ. (ಓದಿ–life After life) ಒಬ್ಬ ಮನುಷ್ಯನ ಸುರೂನ ಮೂರು ವರ್ಷ ಆದ ಅನುಭವ ಅವನ ಜೀವಿತ ಕಾಲಕ್ಕೆ ಅನ್ವಯ ಆದೆಂತ ಹೇಳಿವೆ. ಮಹಾ ಭಾರತಲಿ ಬರುವ ಅಭಿಮನ್ಯು ಕತೆ ಗೊತ್ತುಟ್ಟಲ್ಲಾ. ಮನಸ್ಸ್ ತುಂಬಾ ಮುಖ್ಯ. 'ಮನಸ್ಸಿದ್ದರೆ ಮಾರ್ಗ'. ಮನಸ್ಸೇ ದೇವ್ರು. ನೀ ಹೇಂಗೆ ಯೋಚನೆ ಮಾಡಿಯಾನೋ ಹಾಂಗೆ ಆದೀಯ; ಅದಕ್ಕಾಗಿ ನಡೆ–ನುಡಿ ಸರಿ ಬೇಕುಂತ ಹೇಳ್ದು. ನಮ್ಮ ಪ್ರತಿಯೊಂದು ಯೋಚನೆನೂ ಮೆದುಳಿಲಿ ರಸ ಉತ್ಪತ್ತಿ ಆದೆ ಗಡ. ಒಳ್ಳ ಯೋಚನೆಂದ ಒಳ್ಳ ರಸ. ಕೆಟ್ಟ ಯೋಚನೆಂದ ಕೆಟ್ಟ ರಸ. ಒಳ್ಳ ಯೋಚನೆಂದ ಜೀವನ ಬೆಳ್ಗಿದೆ. ಕೆಟ್ಟ ಯೋಚನೆಂದ ಜೀವನ ಹಾಳಾದೆ. ಅದೇ ನರಕ. ಇದೆಲ್ಲ ಮಾನಸಿಕ ತಜ್ಞರ್ ಕಂಡ್‌ಕಂಡ ಸತ್ಯ. ಇಲ್ಲಿ ಈ ವಿಷಯ ಬೇಡ. ಕಾಲ ಅಂದರೆ ಏನ್‌ಂತ ತಿಳಿಯೊನೊ.

## ಗಟನೆಗಳ ಅಂತರವೇ ಕಾಲ :

ನಿತ್ಯ ಜೀವನಲಿ ನಾವ್ ಕಾಲನ ಅಂದರೆ ಕಳ್ದ್ ಹೋದ ಕಾಲನ ತಿಳಿದು ಹೇಂಗೆ? ಅದನ್ನ್ ಅಳೆಕೆ ನಾವ್ ಏನ್ ಮಾಡಿವೆ.? ಯಾಗೋಳು ಅಂದರೆ ನಿರಂತರವಾಗಿ ಒಂದೇ ರೀತೀಲಿ ಮತ್ತು ಒಂದೆ ದಿಕ್ಕ್‌ಲಿ ಹರಿವ ಕಾಲ ಪ್ರವಾಹಲಿ ಕೆಲವು ಗುರುತ್ತಗಳ ಮಾಡಿಕಂಡವೆ. ನಾವ್ ಹುಟ್ಟಿದ್, ಶಾಲೆಗ ಸೇರ್ದ್, ಪರೀಕ್ಷೆಲಿ ಪಾಸಾಗಿ ಮೇಲಿನ ತರಗತಿಗೆ ಹೋದ್ ಹೀಂಗೆ ಒಂದು ಸಂಗತಿಂದ ಸುರು ಆಗಿ ಮುಂದಿನ ಸಂಗತಿ ನಡ್ದಲ್ಲಿವರೆಗೆ ಕಳ್ದ್ ಹೋದ ದಿನಗಳ ಲೆಕ್ಕ ಹಾಕಿ ಇಷ್ಟ್ ದಿನ ಆತ್‌ಂತ ಹೇಳಿವೆ ನಮ್ಮ ಸ್ವಾತಂತ್ರ್ಯ ದಿನ ಕಳ್ದ್ 163 ದಿನ ಉರುಳಿದ ಮೇಲೆ ಗಣರಾಜ್ಯ ದಿನ ಬಂದದೆ. ನಮ್ಮ ಎರ್ಡ್ ಒತ್ತೊತಿನ ಹುಟ್ಟು ಹಬ್ಬಗಳ ನಡುವೆ ಕಳ್ದ್ ಹೋದ ಕಾಲ ಒಂದು ವರ್ಷ. ಹೀಂಗೆಲ್ಲ ನಾವ್ ಮಾತಾಡ್‌ವೆ. ಹಂಗಾಗಿ ನಡ್ದ ಸಂಗತಿಗಳ ಅಂತರ ಕಾಲ ಅಂತ ನಾವ್ ಹೇಳಕ್ಕ್. ಹೌದು, ಕಾಲನ ಈ ಗುಟ್ಟುನ ಮನುಷ್ಯ ಯಾಗ ಗ್ರಹಿಸಿತ್? ಇದಕ್ಕೆ ಪುರಾವೆ ಏನೂ ಇಲ್ಲೆ ಗಡ. ಹಗಲ್ ರಾತ್ರಿಗಳ ಎಡೆ ಬುಡದ ಯಾತ್ರೆ. ಚಂದ್ರನ ವಿಚಿತ್ರ ವರ್ತನೆ. ಋತುಗಳ ರಾತ್ರಿಗಳ ಎಡೆ ಬುಡದ ಯಾತ್ರೆ. ಚಂದ್ರನ ವಿಚಿತ್ರ ವರ್ತನೆ. ಋತುಗಳ ಕ್ರಮಾಗತ ಪುನರಾವರ್ತನೆ, ಗ್ರಹಣ, ದೂಮಕೇತುಗಳ ಅಪ್ರೂಪದ ಆಗಮನ ಇತ್ಯಾದಿ ಸಂಗತಿಗಳ ಬೆರಗಿಂದ ನೋಡ್ತಿದ್ದ ಮನುಷ್ಯಂಗೆ ತನ್ನ ಅಕ್ಕ ಪಕ್ಕಲಿ ಏನೇನೋ ಬದಲಾವಣೆ ಕಂಡ್‌ಬಾತ್. ಮಕ್ಕಳ ಜನನ, ಬೆಳವಣಿಗೆ, ಮುಪ್ಪು, ಮರಣ, ಬೀಜಂದ ಗಿಡ ಹುಟ್ಟಿ ಬೆಳ್ದ್ ದೊಡ್ಡದಾಗಿ ಸಾಯುವ ನೋಟ;

ಹೀಂಗೆ ಆಂವ ಕಂಡದ್ ಒಂದೇ ತರದ ಬದಲಾವಣೆ. ಸೂರ್ಯ, ಚಂದ್ರ, ಗ್ರಹ ನಕ್ಷತ್ರಗಳ ಚಲನೆ ಒಂದೇ ಕ್ರಮಲಿ ಇದ್ದದೆ. ಆದರೆ ಬೆಟ್ಟಲಿ ಹುಟ್ಟಿ ಕೆಳಗೆ ಹರ್ದ ನೀರ್ ಮುಂದೆ ತೋಡು, ಹಳ್ಳ ಅಗಿ ಸಮುದ್ರ ಸೇಗಿತ್ತೇ ಹೊರ್ತು ಮತ್ತೆ ಹಿಂದೆ ತಿರ್ಗಿ ಬೆಟ್ಟದ ಕಡೆಗೆ ಹರಿದುಲೆ. ಆದಿ ಮಾನವ ಈ ಎಲ್ಲ ಸಂಗತಿಗಳ ಮತ್ತೆ ಮತ್ತೆ ತೂಗಿ ನೋಡಿ ಯೋಚನೆ ಮಾಡ್ತ್. ಆಗ ಬಹುಶಃ ಅವಂಗೆ ಕಾಲಜ್ಞಾನ ಮೂಡ್ತೋ ಏನೋ. ಆದರೆ ಇದಕ್ಕೊಂದು ರೂಪಕೊಟ್ಟು ಕಾಲನ ಲೆಕ್ಕ ಹಾಕುವ ಕ್ರಮ ಬದ್ಧ ರೂಪಕ್ಕೆ ಸರಿ ಪಡ್ಸುವ ಹೊತ್ತಿಗೆ ಸಾಕಷ್ಟ್ ಯುಗಗಳೇ ಕಳ್ದ್ ಹೋಗಿತ್ತ್.

## ಗಡಿಯಾರಂತೇಳಿರೆ ಏನ್?

ನಡೆವ ಸಂಗತಿಗಳ, ಅಂದರೆ ಗಟನೆಗಳ ಅಂತರನ ಅಂದರೆ ಕಾಲನ ಯಾ ಸಮಯನ ಗುರ್ತಿಸಿಕೆ ಯಾ ಅಳೆಕೆ ಇರುವ ಸಾಧನವೇ ಗಡಿಯಾರ. ಏಕತಾನಲಿ ಮಿಡಿವ ಯಾ ಹರಿವ ಯಾ ಕರಗುವ ಯಾ ನಾಶಾವಾಗುವ ಯಾವ್ದೇ ವಸ್ತು ಯಾ ಉಪಕರಣ ತಾತ್ವಿಕ ರೀತಿಲಿ ಗಡಿಯಾರನೇ ಆಚೆ. ಈಗಿನ ಗಡಿಯಾರ ಬಳಕೆಗೆ ಬಾಕೆ ಮುಂದೆ ಪಾಚೀನ ಕಾಲಲಿ ಜಲ ಗಡಿಯಾರ ಮತ್ತು ಮರಳು ಗಡಿಯಾರ ಬಳಕೆಲಿ ಇತ್ತ್. ಇನ್ನೊಂದು ನೆರಳ್ ಗಡಿಯಾರ. ಒಂದು ಕೋಲುನ ನೆಟ್ಟಂಗೆ ಊರಿ ಸೂರ್ಯ ಮೇಲೇರಿದ ಹಾಂಗೆ ಮತ್ತೆ ಕೆಳಗೆ ಜಾರಿದ ಹಾಂಗೆ ಬೀಳ್ವ ನೆರ್ಳ್‌ನ ಸಹಾಯಂದ ಹೊತ್ತುನ ತಿಳ್ಕಂಬ ಕ್ರಮ. ನೆಲದ ಮೇಲಿನ ದೂರನ ಅಳಿಯುಕೆ ಇಂಚ್, ಅಡಿ, ಗಜ, ಮೈಲ್, ಸೆಂಟಿಮೀಟರ್, ಕಿಲೋಮೀಟರ್‌ಂತ ಲೆಕ್ಕ ಹಾಕಿರೆ ಗ್ರಹ ನಕ್ಷತ್ರಗಳ ದೂರನ ಬೆಳಕಿನ ವರ್ಷಾಂತ ಲೆಕ್ಕ ಹಾಕಿವೆ. ಅದೇ ರೀತಿ ಕಾಲನ ಅಳೆಕೆ ಸೆಕೆಂಡ್, ಮಿನಿಟ್, ದಿನ ತಿಂಗ ವರ್ಷ, ಶತಮಾನಂತ ಲೆಕ್ಕ ಹಾಕುವ ಕ್ರಮ. ನಮ್ಮ ಮನೆಲಿರುವ ಗೋಡೆ ಗಡಿಯಾರದ ಕ್ರಿಯೆನ ಹಂಞ ಹೊತ್ತು ಗಮನಿಸಿ ನೋಡುತ್ತಿದ್ದರೆ ಅದರ ಮೇಲೆ ಲೋಲಕ ಒಂದೇ ರೀತಿಲಿ ಆಚೆ ಈಚೆ ಹರಿದಾಡ್‌ತ್ತ ಕಾಲದ ಹರಿಯುವಿಕೆನ ಬಿಡಿ ಬಿಡಿಯಾಗಿ ತೋರ್ಸಿದೆ. ಟಿಕ್ ಟಿಕ್ ಹೇಂಗೆ ಸದ್ದ್ ಮಾಡ್ತ ನಡೆಕಾಕಾನ ಒಂದು ಸೆಕುಂಡು ಎರ್ಡ್ ಸೆಕುಂಡು ಅಂತ ಹೇಳುವೆ. ಪ್ರತಿಯೊಂದು ಸೆಕುಂಡಿನ ಅಂತರ ಒಂದೇ ಆಗಿರುವ ಹಾಂಗೆ ಸೂಕ್ಷ್ಮವಾಗಿ ರಚನೆ ಮಾಡಿಯೊಳೊ, ಹೀಂಗೆ ಅರುವತ್ತ್ ಸೆಕುಂಡು ಆಕನ ಅಂದರೆ ಲೋಲಕ ಅರವತ್ತು ಕಂಪನಿಗಳ ಮುಗ್ಸಿಕಾಕನ ಒಂದು ಮಿನಿಟ್ ಕಳ್ತ್‌ಂತ ತಿಳ್ಕಂಡವೆ. ಗಡಿಯಾರಲಿ ಜಾರುವ ದೊಡ್ಡ ಮುಳ್ಳು ಮಿನಿಟಿನ ಕಾಲನ ತೋರ್ಸಿದೆ. ಹಾಂಗೆ ಸಾಗಿ ಸಾಗಿ ಅರುವತ್ತ್

ಮಿನಿಟಾಕನ ಸಣ್ಣ ಮುಳ್ಳು ಹಿಂದೆ ಇದ್ದ ಜಾಗಂದ ಒಂದು ಅಂಕೆ ಮುಂದೆ ಹೋದೆ. ಆಗ ಒಂದು ಗಂಟೆ ಮುಗ್ತ್‌ಂತ ತಿಳ್ದವೆ. ಗಡಿಯಾರಲಿ ಸಣ್ಣ ಮುಳ್ಳು ಎರ್ಡ್ ಪೂರ್ತಿ ಸುತ್ತಿ ಮುಗ್ಸಿಕಾಕನ ಇಪ್ಪತ್ತಾಲ್ಕು ಗಂಟೆ ಆತ್‌ಂತಲೂ ಒಂದು ದಿನ ಕಳ್ತ್‌ಂತಲೂ ತಿಳ್ಕಂಡವೆ. ಹಾಂಗೆನೆ ಈ ಸಮಯ ಹಗಲ್ ರಾತ್ರಿಗಳ ಒಂದು ಸರದಿ ಮುಗ್ದದೂ ನಮ್ಮ ಗಮನಕ್ಕೆ ಬಂದದೆ.

**ತಾರೀಕ್ ಪಟ್ಟಿ :** ದಿನದ ಸಂಗತಿಗಳ ಅಂದರೆ ಗಂಟೆ, ಮಿನಿಟ್, ಸೆಕುಂಡುಗಳ, ಗಡಿಯಾರ ನಾವ್ಗೆ ತಿಳ್ಸಿದೆ. ಆದರೆ ದಿನ, ದಿನಗಳ ಗುಂಪುನ ಲೆಕ್ಕ ಹಾಕಿಕೆ ಗಡಿಯಾರಕ್ಕೆ ಆದುಲೆ. ಅದ್ಕೆ ನಾವು ಬೇರೇನೇ ವ್ಯವಸ್ಥೆ ಮಾಡೋಕಾದೆ. ತಾರೀಕು ಪಟ್ಟಿ ಅಂತದೊಂದು ವ್ಯವಸ್ಥೆ. ನಾವು ನಮ್ಮ ಮನೆಲಿ ತೂಗು ಹಾಕುವ ತಾರೀಕು ಪಟ್ಟಿ ನಾವ್ಗೆಲ್ಲ ಗೊತ್ತು. ಅದರ್ಲಿ ಏನೆಲ್ಲಾ ಉಟ್ಟು? ವರ್ಷ, ತಿಂಗ ಮೇಲ್ಗಡೆ ಇದ್ದರೆ ಅದರ ಕೆಳಗೆ ಕ್ರಮಕ್ಕೆ ಸರಿಯಾಗಿ ದಿನ ತಾರೀಕ್‌ಗಳ ಲೆಕ್ಕ ಉಟ್ಟು. ಸೂರ್ಯ ಮೂಡ್ವ ಕಂತುವ ಹಾಂಗೆ ಬೇರೆ ಬೇರೆ ವಿವರ ಸಹ ಇದ್ದದೆ. ಒಂದೊಂದು ತಿಂಗಳಿಗೆ ಒಂದೊಂದು ಹಾಳೆ. ಹನ್ನೆರಡ್ ಹಾಳೆ ಮುಗಿಯಕಾಕನ ಒಂದು ವರ್ಷ ಮುಕ್ತ್‌ಂತ ಹೇಳ್ವೆ. ಮತ್ತೆ ಹೊಸ ಪಟ್ಟಿ ಬೇಕು.

ಒಂದು ವರ್ಷದ ದಿನಗಳ ಲೆಕ್ಕ ಹಾಕಿರೆ ತಲಾ 365 ದಿನ ಬಂದದೆ. ಆದರೆ ಕೆಲವು ವರ್ಷ 366 ಇದ್ದದೆಲ್ಲೊ. ಹೌದು, ಅಂದರೆ ಒಂದು ವರ್ಷಕ್ಕೆ ನಿಜವಾಗಿ 365. 2425 ದಿನಗ. ಅದಕ್ಕಾಗಿ ವರ್ಷಕ್ಕೆ 365 ದಿನಗಂತ ಪರಿಗಣಿಸಿ, ಉಳ್ದ ಸಮಯ ಉಟ್ಟಲ್ಲೋ ಅದರ ಲೆಕ್ಕ ಹಾಂಗೆ ನಾಲ್ಕ್ ವರ್ಷಕ್ಕೊಮ್ಮೆ 366 ದಿನ ಅಂತ ವ್ಯವಸ್ಥೆ ಮಾಡಿಕಂಡದ್ದ್. ಆ ವರ್ಷನ ನಾವ್ ಹೆಚ್ಚುವರಿ ವರ್ಷಾಂತ ಹೇಳ್ದು. ಆ ದಿನನ ಸೇರ್ಸುದು ಎಲ್ಲಿ ಮತ್ತೆ ಹೇಂಗೆ? ಫೆಬ್ರವರಿಲಿ ಸಾಮಾನ್ಯ 28 ದಿನ ಇರುದು. ಹೆಚ್ಚುವರಿ ದಿನದ ವರ್ಷ ಫೆಬ್ರವರಿ 29 ದಿನ ಇದ್ದದೆ. ಆ ವರ್ಷಲಿ ಹುಟ್ಟಿದವುಕೆ ನಾಲ್ಕ್ ವರ್ಷಕೊಮ್ಮೆ ಹುಟ್ಟಿದ ಹಬ್ಬ. ನಮ್ಮ ಮಾಜಿ ಪ್ರಧಾನ ಮಂತ್ರಿ ಮೊರಾರ್ಜಿ ದೇಸಾಯಿ ಇದ್ದಲ್ಲೊ ಅವು ಹುಟ್ಟಿದ್ ಫೆಬ್ರವರಿ 29ಲ್ಲಿ. ಹೆಚ್ಚುವರಿ ದಿನದ ವರ್ಷಾನ ನಾವು ಸುಲಬಲಿ ತಿಳ್ಕಂಬ ಕ್ರಮ ಹೇಂಗೇ? ನೋಡಿ 2016ನೇ ವರ್ಷಾಲಿ 366 ದಿನಗ. 2017, 2018, 2019ಲ್ಲಿ 365 ದಿನಗ. ಬರುವ 2020ನೇ ವರ್ಷಾಲಿ 366 ದಿನಗ. ಯಾವ ವರ್ಷ 4 ರಿಂದ ಶೇಷ ಇಲ್ಲದೇ ಭಾಗಿಸಿ ಹೋದೆನೋ ಆ ವರ್ಷ 366 ದಿನಗಂತ ತಿಳಿಯಕ್. ಆ ವರ್ಷ ಹೆಚ್ಚುವರಿ ವರ್ಷ.

**ದಿನ, ವರ್ಷ:-** ಭೂಮಿಗೆ ಏಕ ಕಾಲಲಿ ಎರ್ಡ್ ತರದ ಚಲನೆ ಉಟ್ಟು.

ಬುಗುರಿನ ಹಾಂಗೆ ತನ್ನ ಅಕ್ಷಲಿ ಸುತ್ತು ತಿರ್ಗ್ದು. ಒಂದು ತರದ ಚಲನೆ ಇದಕ್ಕೆ ಹಾಂಗೆ ತನ್ನ ಅಕ್ಷಲಿ ಸುತ್ತು ತಿರ್ಗ್ದು. ಒಂದು ತರದ ಚಲನೆ ಇದಕ್ಕೆ ದೈನಂದಿನ ಚಲನೆ ಇಲ್ಲರೆ ಆವರ್ತನೆ ಎಂತ ಹೆಸ್ರ್. ಇನ್ನೊಂದು ನಾವ್ ದೇವಸ್ಥಾನಕ್ಕೆ ಸುತ್ತ ಪ್ರದಕ್ಷಿಣೆ ಬಂದೆವಲ್ಲ, ಹಾಂಗೆ ಸೂರ್ಯನ ಸುತ್ತ ಸಂಚರಿಸುವ ಚಲನೆ. ಇದಕ್ಕೆ ವಾರ್ಷಿಕ ಚಲನೆ ಯಾ ಪರಿಭ್ರಮಣೆಂತ ಹೆಸ್ರ್. ಈ ಸಂಗತಿನ ನಾವ್ ಹೀಂಗೂ ಹೇಳ್‌ಕ್. ನಾವ್ ದಿನಕ್ಕೊಂದು ಪಿಕ್‌ನಿಕ್, ವರ್ಷಕ್ಕೊಂದು ಟೂರ್ ಹೋದವೆಂತ. ಇದ್ ಅಂತಿಂಥ ಟೂರ್ ಅಲ್ಲ ಬ್ರಹ್ಮಾಂಡಲಿ ಮಾಡುವ ಟೂರ್ ದೈನಂದಿನ ಚಲನೆಂದ ಒಂದು ಹಗಲ್ ಮತ್ತು ರಾತ್ರಿ ಸೇರಿ ಒಂದು ದಿನಂತ ಲೆಕ್ಕ. ಸೂರ್ಯನ ಸುತ್ತ ಚಲಿಸುವ ಕಾಲಕ್ಕೆ ಒಂದು ವರ್ಷ. ಹೀಂಗೆ ದಿನ ಮತ್ತು ವರ್ಷ ಎಂಬ ಕಾಲ ಸೂಚಿಗ ನಾವ್ಗೆ ನೈಸರ್ಗಿಕವಾಗಿ ಸಿಕ್ಕಿದೆ. ಇದನ್ನ್ ತಿಳ್ಸುವ ಗಡಿಯಾರ ಸಾಕ್ಷಾತ್ ನಮ್ಮ ಭೂಮಿ.

ಸಮಯ ಲೆಕ್ಕಾಚಾರ : ಭೂಮಿಗೆ ತನ್ನ ಅಕ್ಷಲಿ ಪೂರ್ತಿ ಒಂದು ಸುತ್ತು ಬಾಕೆ ಬೇಕಾಗುವ ಹೊತ್ತು 24 ಗಂಟೆ. ಇದ್ ಪೂರ್ತಿ ಒಂದು ಹಗಲ್ ಒಂದು ರಾತ್ರಿ ಸೇರಿ. ಭೂಮಿಯ ಆಕಾರ ಗೋಳಾಕಾರ. ಒಂದು ವೃತ್ತಕ್ಕೆ 360 ಡಿಗ್ರಿ. ಭೂಮಿ 360 ಡಿಗ್ರಿ ಸರಿಯಕೆ 24 ಗಂಟೆ ಬೇಕಾದೆ. ಅಂದರೆ ಒಂದು ಡಿಗ್ರಿ ಸರಿಯಕೆ ನಾಲ್ಕ್ ನಿಮಿಷ ಬೇಕಾದೆ (ಗಂ. 24X60 ನಿಮಿಷ)

$$\frac{\text{ಗಂ. } 24\times60 \text{ ನಿಮಿಷ}}{360 \text{ ಡಿಗ್ರಿ}} = 4 \text{ ನಿ.}$$

**ಆಕಾಶ-ಗಡಿಯಾರ-ಚಂದ್ರ :** ನಾವ್ಗೆ ತುಂಬಾ ಸುಲಬಲಿ ಕಾಂಬ ಆಕಾಶ ಗಡಿಯಾರ ಅಂದರೆ ಚಂದ್ರ. ಚಂದ್ರ ಭೂಮಿಗೆ ಸುತ್ತು ಬರುವ ಒಂದು ಉಪಗ್ರಹ. ಹುಣ್ಣಿಮೆಂದ ಹುಣ್ಣಿಮೆಗೆ ಹಾಂಗೆ ಅಮಾಸ್ಯೆಂದ ಅಮಾಸ್ಯೆಗೆ ಒಟ್ಟು ಮೂವತ್ತು ದಿನ ಬೇಕಾದೆ (15+15) ಈ ಅವಧಿಗೆ ತಿಂಗಳು ಅಂತಲೇ ಹೆಸ್ರ್, ಅಮಾವಾಸ್ಯೆಂದ ಮುಂದಿನ ಹುಣ್ಣಿಮೆವರೆಗೆ ಹದಿನೈದ್ ದಿನಗಳ ಕಾಲನ ಶುಕ್ಲಪಕ್ಷ ಎಂತಲೂ, ಹುಣ್ಣಿಮೆಂದ ಮುಂದಿನ ಅಮಾವಾಸ್ಯೆ ವರೆಗಿನ ಅಷ್ಟೇ ದಿನಗಳ ಕಾಲನ ಕೃಷ್ಣಪಕ್ಷ ಎಂತಲೂ ನಾವು ಹೇಳಿವೆ. ಒಂದು ಪಕ್ಷಲಿ ಸರಿಸುಮಾರಾಗಿ ಎರ್ಡ್ ವಾರಗ ಮತ್ತೆ ಒಂದು ವಾರಲಿ ಏಳ್ ದಿನ ಇದ್ದದೆ. ದಿನ, ವಾರ, ಪಕ್ಷ, ತಿಂಗ ಎಂಬ ಈ ಸುಲಭ ಲೆಕ್ಕಾಚಾರ ಮನುಷ್ಯನ ತಿಳುವಳಿಕೆಗೆ ಸುರೂ ಬಂದದ್. ಹನ್ನೆರಡ್ ತಿಂಗ ಕಳೆಕಾಕನ ವರ್ಷ ಮುಗಿತಿತ್ತ್. ಹೀಂಗಾಗಿ ವರ್ಷಕ್ಕೆ ಹನ್ನೆರಡ್ ತಿಂಗತೇಳುವ ಕಲ್ಪನೆ ಮೂಡ್ತ್. ಆದರೆ ನಿಜವಾಗಿ ತಿಂಗಳ ಅವದಿ 29.5 ದಿನಗ. ಇದಕ್ಕೆ ಚಂದ್ರಮಾನ ತಿಂಗ ಅಂತ ಹೆಸ್ರ್. ಇಂದ್ ರಾತ್ರಿ ಹುಣ್ಣಿಮೆಂತ ತಿಳ್ಕಂಡ್

ಮುಂದಿನ ಆರ್ ಹುಣ್ಣಿಮೆ ಮುಗಿಯಕಾಕನ ಎಷ್ಟ್ ದಿನ ಆತ್‌ಂತ ಲೆಕ್ಕ ಹಾಕಿರೆ 177 ದಿನ ಸಿಕ್ಕಿದೆ. ಈ ರೀತಿ ಹನ್ನೆರಡ್ ಚಂದ್ರಮಾನ ಉರುಳಿಕಾಕನ 354 ದಿನ ಮಾತ್ರ ಕಳ್ದಿದ್ದದೆ. ಆದರೆ ಒಂದು ವರ್ಷ (365*2422) ಪೂರ್ತಿ ಆಕೆ. ಇನ್ನು ಕೆಲವು ದಿನಗ ಅಂದರೆ 11 ದಿನಗ ಬೇಕಾದೆ. ಬರೇ ಒಂದು ವರ್ಷಲಿ ಇಷ್ಟ್ ದಿನ ಕಡಿಮೆ ಆದರೆ ಐದಾರ್ ವರ್ಷಲಿ ಎಷ್ಟ್ ದಿನಗಳ ವ್ಯತ್ಯಾಸ ಬಂದದೆ ನೋಡಿ. ಋತುಗಳ ಕಾಲಮಾನನೇ ತಪ್ಪಿ ಹೋದೆ. ಸುಮಾರ್ ನಾಲ್ಕ್ ಸಾವಿರ ವರ್ಷಗಳ ಹಿಂದೆನೇ ಈ ಸಮಸ್ಯೆ ಮನುಷ್ಯನ ಗಮನಕ್ಕೆ ಬಂದಿತ್ತ್. ಮುಂದೆ ಮನುಷ್ಯನ ಆಕಾಶ ಜ್ಞಾನ ಬೆಳ್ದ್ ಕಾಲ ಕೂಡಿ ಬಾಕನ ಚಂದ್ರನ ಲೆಕ್ಕಚಾರ ಬುಟ್ಟ್ ಸೌರ ವರ್ಷನ (ಸೂರ್ಯ) ಒಪ್ಪಿಕಂಡತ್.

## ಆಕಾಶ, ಗಡಿಯಾರ, ಸೂರ್ಯ

ಆಕಾಶ ಕಾಯಗಳ ಪೈಕಿ ಚಂದ್ರನಿಗಿಂತ ಸೂರ್ಯ ಸ್ಪಷ್ಟವಾಗಿ ಮತ್ತು ಕ್ರಮಕ್ಕೆ ಅನುಸರಿಸಿ ಕಾಂಬ ವಸ್ತು. ಸೂರ್ಯ ಒಂದು ನಕ್ಷತ್ರ. ಅದಕ್ಕೆ ಸ್ವಂತ ಬೆಳ್ಕುಟ್ಟು. ಚಂದ್ರ ಒಂದು ಗ್ರಹ ಅದರಲ್ಲೂ ಒಂದು ಉಪಗ್ರಹ. ಅದಕ್ಕೆ ಅದರ್ದೆ ಬೆಳ್ಕ್ ಇಲ್ಲೆ. ಚಂದ್ರ ಸೂರ್ಯಂದ ಬಂದ ಬೆಳ್ಕ್‌ನ ಪ್ರತಿಬಿಂಬಿಸುದು. ಸೂರ್ಯ ಮೂಡುವಲ್ಲಿಂದ ಮುಳ್ಗುವರೆಗಿನ ಹಗಲ್ ಹೊತ್ತು ಮತ್ತೆ ಸೂರ್ಯ ಮೂಡುವಲ್ಲಿವರೆಗಿನ ರಾತ್ರಿ ಹೊತ್ತು ಈ ಎರ್ಡ್ ಅವಸ್ತೇ ಸ್ವಷ್ಟಾಗಿ ನಮ್ಮ ಗಮನಕ್ಕೆ ಬಂದದೆ. ಆದರೆ ರಾತ್ರಿ ಮತ್ತು ಹಗಲಿನ ಹೊತ್ತು ಒಂದೇ ತರಲಿ ಇದ್ದನೆನೋ? ಅದ್ ಹೆಚ್ಚ್ ಕಡಿಮೆ ಆಗ್ತಾ ಇದ್ದದೆ. ನಾವ್ಗೆ ಜೂನು ತಿಂಗಳ ಹಗ್‌ಲ್ ಉದ್ದ ಆಗಿದ್ದರೆ ದಶಂಬರ ಹಗ್‌ಲ್ ಕಡಿಮೆ, ರಾತ್ರಿ ಉದ್ದ ಇದ್ದದೆ. ನಾವ್ ಕ್ಯಾಲೆಂಡರ್ ನೋಡಿರೆ ಅದರ್ಲಿ ವರ್ಷದ ತಿಂಗಳ ಪಟ್ಟಿಲಿ ಪ್ರತಿ ದಿನ ಸೂರ್ಯ ಮೂಡ್ವ ಮತ್ತು ಕಂತುವ ಹೊತ್ತು ಗೊತ್ತಾದೆ.

ನಾವ್ಗೆ ಗೊತ್ತಿರಕಾದ ಇನ್ನೊಂದು ಸಂಗತಿಂತೇಳಿರೆ ಅಕ್ಷಾಂಶ ಮತ್ತು ರೇಖಾಂಶಗಳ ವಿಚಾರ. ನೀವ್ ಭೂಮಿಯ ಪಟ, ಹಾಂಗೇ ಅಟ್ಲಾಸ್ ನೋಡಿ. ಅದರ್ಲಿ ಮೂಡು-ಪಡುವ ದಿಕ್ಕಿಗೆ ಹಾಂಗೆ ತೆಂಕು-ಬಡಗಿನ ಕಡೆಗೆ ಎಳ್ಕಂಡ್ ಇರುವ ಗೆರೆಗ ಕಂಡವೆ. ಮೂಡು ಪಡ್ವ ದಿಕ್ಕಿಗೆ ಇರುವ ಗೆರೆಗೆ ಅಕ್ಷಾಂಶ ರೇಖೆ ಅಂತ ಹೆಸ್ರ್. ಇದ್ ನಾವ್ಗೆ ಹವಾಮಾನ ತಿಳಿಯಕೆ ಬೇಕಾದೆ. ತೆಂಕ-ಬಡ್ಗಕ್ಕೆ ಇರುವ ಗೆರೆಗ ರೇಖಾಂಶ ರೇಖೆ. ಗಂಟೆ ಲೆಕ್ಕಚಾರಕ್ಕೆ ಇದ್ ಬೇಕು. ಇಂತ ಗೆರೆಗ ಭೂಮಿಯ ಮೇಲೆ ಇಲ್ಲೆ. ಇದ್ ಕಾಲ್ಪನಿಕ ರೇಖೆ. ಭೂಮಿನ ಸಮ ಎರ್ಡ್ ಪಾಲಾಗಿ ಮಾಡುವ ಮೂಡ-ಪಡ್ವ ದಿಕ್ಕಿಗೆ ಎಳ್ದ್ ರೇಖೆನ 'ಭೂ ಮಧ್ಯರೇಖೆ'

ಅಂತ ಕರಿದು. ಈ ರೇಖೆಂದ ತೆಂಕು ಮತ್ತು ಬಡಗು ದಿಕ್ಕಿನ ಧ್ರುವಗಳ ಕಡೆಗೆ ಹೋದಾಂಗೆ ಹಗಲ್ ಮತ್ತು ರಾತ್ರಿ ಸಮಯಲಿ ತುಂಬಾ ಹೆಚ್ಚ್ ಕಡಿಮೆ ಆದೆ. ಸೂರ್ಯ ಅತೀ ಉತ್ತರಲಿ ಇರಿಕಾಕನ ಅಲ್ಲಿ ಕತ್ತಲಾದುಲೆ ದಕ್ಷಿಣಲಿ ಬೆಳಕಾದುಲೆ. ಹಾಂಗೆ ಅತೀ ದಕ್ಷಿಣಲಿ ಇರಿಕಾಕನ ಇಲ್ಲಿ ಕತ್ತಲಾದುಲೆ ಉತ್ತರಲಿ ಬೆಳಕಾದುಲೆ. ಈ ವಿಚಿತ್ರ ಸಂಗತಿ ಏಕಾದೆಂತೇಳಿರೆ ಭೂಮಿನ ಚಲನೆ ಮತ್ತು 23.5 ಡಿಗ್ರಿ ಮಾಲಿಕಂಡ್ ಇರುದರ್‌ಂದ ಸೂರ್ಯ ಎಲ್ಲಿಗೂ ಹೋದುಲೆ. ಅದ್ ಇದ್ದಲ್ಲಿನೆ ಇದ್ದದೆ. ಭೂಮಿನ ಚಲನೆಂದಾಗಿ ಹೀಂಗೆಲ್ಲ ನಾವ್ಗೆ ಕಾಂಬೋದಷ್ಟೆ. ನಾವು ದ್ರುವ ಪ್ರದೇಶಕ್ಕೆ ಹೋದರೆ ಈ ಸಂಗತಿ ಗೊತ್ತಾದೆ.

ಅಂತು ನಮ್ಮ ಭೂಮಿ ಮೇಲೆ ಯಾವುದೇ ಪ್ರದೇಶಲಿ ಒಂದೇ ಹೊತ್ತಿಗೆ ಸೂರ್ಯ ಮೂಡಿ ಕಂತುದುಲೆ. ಈ ಕಾರಣಕ್ಕಾಗಿ ನಮ್ಮ ಸೂರ್ಯನ ಆದರ್ಶ ಗಡಿಯಾರ ಅಂತ ಒಪ್ಪಿಕಂಡ್ ವ್ಯವಹಾರ ಮಾಡಿಕೆ ಆದುಲೆ. ಹಾಗೆಂತೇಳಿ ಸೂರ್ಯನ ಬುಟ್ಟ್ ಹಾಕಿ ಕಾಲ ಮಾಪನ ಮಾಡಿಕೂ ಆದುಲೆ. ಏಕೆ? ಪ್ರಪಂಚದ ನಡವಳಿಕೆ ಎಲ್ಲ ಸೂರ್ಯನ ನಂಬಿ ನಡಿಯುತ್ತರುದು. ಹಾಂಗಾಗಿ ಈ ಗೊಂದಲಂದ ಪಾರಾಕೆ ನಾವ್ಗೆ ಇರುವ ದಾರಿತೇಳಿರೆ ನೈಸರ್ಗಿಕ ಗಡಿಯಾರ ಸೂರ್ಯನ ನಂಬಿ ಸೂರ್ಯನ ವಕ್ರ ವರ್ತನೆಳ್‌ಂದ ತೊಂದರೆ ಆಗದ ಕೃತಕ ಗಡಿಯಾರನ ಬಳಕೆಗೆ ತಾದು. ನಾವೀಗ ಅದನ್ನೆ ಮಾಡಿ ನಮ್ಮ ಕೆಲಸ ಕಾರ್ಯಗಳ ನಡ್ಸ್‌ಸ್ತಾ ಇರ್ದು.

## ಸೂರ್ಯನ ಅವಲಂಬಿಸಿದ ಕಾಲಮಾನ :-

ಸೂರ್ಯ ನಾವು ಹೇಳುವ ಹಾಂಗೆ ಕೇಳುವ ಆಕಾಶಕಾಯ ಅಲ್ಲ. ಅಂವ ಬಾರಿ ದೊಡ್ಡಂವ ಮತ್ತು ಶಕ್ತಿವಂತ. ಅಂವ ನಮ್ಮ ಭೂಮಿಗಿಂತ ಹನ್ನೆರಡ್ ಪಾಲ್ ದೊಡ್ಡಂವ ಮತ್ತು ಅಂವನ ಮೇಲ್ಭಾಗದ ತಾಪಮಾನ 5587.778 ಡಿಗ್ರಿ ಉಷ್ಣತೆ. ಹಾಂಗಾಗಿ ಸೂರ್ಯಂಗೆ ನಾವ್ ಹೊಂದಿಕಂಡ್ ನಾವ್ಗೆ ಆಗುವ ಕಾಲ ಮಾಪಕ ಕ್ರಮನ ಆಕಾಶ ವಿಜ್ಞಾನಿಗ ವ್ಯವಸ್ಥೆ ಮಾಡಿ ಕೊಟ್ಟೊಳೊ. (1) ನಡು ರಾತ್ರಿಗೆ ಸರಿಯಾಗಿ ದಿನ ಸುರು ಆಗಿ ಮುಂದಿನ ನಡು ರಾತ್ರಿಗೆ ಕೊನೆ ಆದು. ಆ ಹೊತ್ತಿನೊಳಗೆ ಭೂಮಿ ಬುಗುರಿನ ಹಾಂಗೆ ತನ್ನ ಸುತ್ತ ಒಂದು ಸುತ್ತುನ ಮುಗ್ಸಿದ್ದದೆ.

(2) ಒಂದು ದಿನ ಮುಗ್ದ್ ಹೊಸ ದಿನ ಸುರು ಆದ 180 ಡಿಗ್ರಿ ಪಶ್ಚಿಮ ಮತ್ತು 180 ಡಿಗ್ರಿ ಪೂರ್ವ ರೇಖಾಂಶ ರೇಖೆಲಿ. ಇವು ಎರ್ಡ್ ಕೂಡ ಒಂದೇ ರೇಖೆ. ಇದಕ್ಕೆ ಅಂತರ ರಾಷ್ಟ್ರೀಯ 'ದಿನ ರೇಖೆ' ಅಂತ ಹೆಸ್ರ್. ಇದ್ 0 ಡಿಗ್ರಿ

ರೇಖಾಂಶ ಯಾ ಗ್ರೀನಿಚ್ ರೇಖೆನ ಸರಿ ಮತ್ತೊಂದು ಪಕ್ಕಲಿ ಇದ್ದದೆ. ಈ ರೇಖೆನ ಪಶ್ಚಿಮಕ್ಕೂ ಪೂರ್ವಕ್ಕೂ ಒಂದು ದಿನದ ವ್ಯತ್ಯಾಸ ಇದ್ದದೆ. ಉದಾ: 180 ಡಿಗ್ರಿ ರೇಖಾಂಶ ರೇಖೆನ ಪಶ್ಚಿಮಕ್ಕೆ ದಶಂಬರ 31 ಆಗಿದ್ದರೆ ಪೂರ್ವಕ್ಕೆ ಜನವರಿ ತಾರೀಖ್ ಒಂದು ಆಗಿದ್ದದೆ. ನೀವ್ ಹಡಗ್‌ಲಿ ಯಾ ವಿಮಾನಲಿ ಹೋಕಾಕನ ಬೇರೆ ದೇಶಕ್ಕೆ ಹೋಕಾಕನ ಅಲ್ಲಿನ ಸಮಯ ಹೇಳುವ ಹಾಂಗೆ ಇಲ್ಲಿನೂ ಹೇಳುವೆ. ಅಂತರರಾಷ್ಟ್ರೀಯ ದಿನ ರೇಖೆ ಪೆಸಿಫಿಕ್ ಸಾಗರಲಿ ಯು.ಎಸ್.ಎಸ್.ಆರ್ (ರಷ್ಯಾ) ಮತ್ತು ಅಲಾಸ್ಕ (ಯು.ಎಸ್.ಎ.) ದ ನಡೂಲಿ ಹಾಂಗೆನೆ ದ್ವೀಪಗಳ ಗುಂಪು ಇರುವಲ್ಲಿ ಕೆಲವೊಂದು ಸಮಸ್ಯೆಗಳ ಪರಿಹಾರಕ್ಕಾಗಿ ಒಂದೇ ದೇಶಕ್ಕೆ ಒಳಪಟ್ಟ ದ್ವೀಪಗ ಒಂದೇ ಗುಂಪುಲಿ ಇರುವ ಹಾಂಗೆ ಅಂಕುಡೊಂಕಾಗಿ ಗುರ್ತಿಸಿಯೊಳೊ. (ಅಟ್ಲಾಸ್ ನೋಡಿ)

(3) ಒಂದು ದಿನದ 24 ಸಮ ಪಾಲ್‌ಗಳಾಗಿ ಮಾಡಿಕಣಕು. ಅದಕ್ಕೆ ಗಂಟೆ ಅಂತ ಹೆಸ್ರ್. ಪ್ರತಿ ಗಂಟೆನ 60 ಸಮ ಪಾಲಾಗಿ ಮಾಡಿಕಣಕು. ಅದಕ್ಕೆ ಮಿನಿಟ್ ಅಂತ ಹೆಸ್ರ್. ಪ್ರತಿ ಮಿನಿಟ್‌ನ ಪುನಃ 60 ಮಾಡಿಕಣಕು ಅದಕ್ಕೆ ಸೆಕುಂಡ್ ಅಂತ ಹೆಸ್ರ್.

(4) ಋತುಗಳ ಆವರ್ತನೆ ಒಮ್ಮೆ ಮುಗಿಯಕಾಕನ ಒಂದು ವರ್ಷ ಆದೆ. ಈ ಅವಧಿಲಿ ಭೂಮಿ ಸೂರ್ಯಂಗೆ ಒಂದು ಸುತ್ತು ಮುಗ್ಸಿದೆ.

(5) ನಿಜಕ್ಕಾದರೆ ಒಂದು ವರ್ಷಲಿ 365.2422 ದಿನಗ ಇರುದು ತಾನೆ. ಅದಕ್ಕಾಗಿ ಹೆಚ್ಚಿನ ಸಮಯ ಅಂದರೆ 0.2422 ದಿನನ ಸರಿ ಹೊಂದಿಸಿಕ್ಕನ ಪ್ರತಿ ನಾಲ್ಕನೆ ವರ್ಷ 366 ದಿನಗ ಅಂತ ಹೊಂದಿಸಿಕಂಡ್ ಒಪ್ಪಿಕೊಂಡೊಳೊ. ಈ ವರ್ಷಕ್ಕೆ 'ಅಧಿಕ ವರ್ಷ' ಅಂತ ಹೆಸ್ರ್. ಈಗ ಎಲ್ಲ ಗಡಿಯಾರಗ ತೋರಸುದು ಸೆಕುಂಡ್, ಮಿನಿಟ್ ಮತ್ತು ಗಂಟೆಗಳ. ಎಲ್ಲ ತಾರೀಕು ಪಟ್ಟಿ ತೋರ್ಸುದು ದಿನ, ವಾರ, ತಿಂಗಳ ಮತ್ತು ವರ್ಷಗಳ್ನ. ನಾವು ಒಪ್ಪಿಕಂಡ ಈ ಎಲ್ಲಾ ಕ್ರಮಗಳಿಂದಾಗಿ ಪ್ರಪಂಚದ ಎಲ್ಲಾ ಕಡೆ ನಮ್ಮ ನಾಗರಿಕ ಜೀವನ ಆತಂಕ ಇಲ್ಲದೆ ನಡ್ದದೆ.

## ಕಾಲ ಮಾಪನ ಕ್ರಮಲಿ ಎರ್ಡ್ ತರ :-

ನಮ್ಮ ಜಗತ್ತಿನ ಎಲ್ಲ ದೇಶಗ ಅನುಸರಿಸುವ ಕಾಲಮಾಪನ ಒಂದು ಸೂತ್ರದ ಮೇಲೆ ನಡ್ದದೆ. ಹಾಂಗಾಗಿ ನಾವು ವ್ಯವಹರಿಸುವ ಕಾಲ ಮಾಪನ ಕ್ರಮಗಳ್ಲಿ ಎರ್ಡ್ ತರ ಉಟ್ಟು. ಒಂದು ಸ್ಥಳೀಯ ಕಾಲ, ಇನ್ನೊಂದು ನಿರ್ಧಾರಿತ ಕಾಲ. ಸಮಯ ಲೆಕ್ಕ ಮಾಡಿಕೆ ನಾವು ಮಾಡಿಕಂಡ ವ್ಯವಸ್ಥೆ ಏನ್‌ಂತ ಹೇಳಿರೆ ಗೋಲದ ಮೇಲೆ ಉತ್ತರ ಧ್ರುವ ಮತ್ತು ದಕ್ಷಿಣ ಧ್ರುವ ಜೋಡಿಸುವ ಹಾಂಗೆ

ಗೆರೆಗಳ ಎಳ್ದಳೊ. ಇದ್ಕೆ ರೇಖಾಂಶ ರೇಖೆ ಅಂತ ಹೆಸ್ರ್. ಡಿಗ್ರಿಗೆ ಒಂದರ ಹಾಂಗೆ ಎಳ್ದರೆ 360 ಗೆರೆಗ ಆದೆ. ಏಕೆಂತೇಳಿರೆ ಒಂದು ವೃತ್ತಕ್ಕೆ 360 ಡಿಗ್ರಿ. ನಮ್ಮ ಭೂಮಿಯ ಆಕಾರ ಗೋಲಾಕಾರ. ರೇಖಾಂಶ ರೇಖೆ ಕಾಲ್ಪನಿಕ ರೇಖೆ. ಭೂಮಿಯ ಮೇಲೆ ಇಂತ ರೇಖೆಗ ಇಲ್ಲೆ. ಭೂಮಿಗೆ ಒಂದು ಡಿಗ್ರಿ ಸರಿಯಕೆ 4 ನಿಮಿಷ ಬೇಕಾದೆ. (ಗಂ.24*ನಿಮಿಷ60) = 4 ನಿಮಿಷ).

360

ಆದ್ದರ್‌ಂದ ಒಂದು ಡಿಗ್ರಿಗೆ ಸಮಯಲಿ ಇರುವ ವ್ಯತ್ಯಾಸ ಅಂದರೆ 4 ನಿಮಿಷ. ನಾವ್ಗೆ ಒಂದು ರೇಖಾಂಶ ರೇಖೆನ ಸಮಯ ಗೊತ್ತಿದ್ದರೆ ಜಗತ್ತಿನ ಯಾವುದೇ ರೇಖಾಂಶ ರೇಖೆನ ಸಮಯ ಲೆಕ್ಕ ತಿಳಿಯಕ್. ಉದಾ: 0 ಡಿಗ್ರಿ ರೇಖಾಂಶ ರೇಖೆ ಯಾ ಗ್ರಿನಿಚ್ ರೇಖೆನ ಸಮಯ ಮಧ್ಯಾಹ್ನ 12 ಗಂಟೆ ಆದರೆ 30 ಡಿಗ್ರಿ ಪೂರ್ವ ರೇಖೆನ ಸಮಯ ಅಪರಾಹ್ನ 2 ಗಂಟೆ. ಅದೇ ಹೊತ್ತಿಗೆ 30 ಡಿಗ್ರಿ ಪಶ್ಚಿಮ ರೇಖಾಂಶ ರೇಖೆನ ಸಮಯ ಪೂರ್ವಾಹ್ನ 10.00 ಗಂಟೆ. ಸ್ಥಳೀಯ ಕಾಲ :- ಅಂದರೆ ಭೂಮಿನ ಮೇಲೆ ಆಯಾಯ ಜಾಗಲಿ ಹಾದ್ ಹೋಗುವ ರೇಖಾಂಶ ರೇಖೆನ ಕಾಲ. ಯಾ ಸ್ಥಳೀಯ ಕಾಲನ ನಾವು ಅನುಸರಿಸಿರೆ ಏನಾದೆ? ಆಗ ದೆಹಲಿಗೆ ಒಂದು ಸಮಯ, ಮುಂಬಯಿಗೆ ಒಂದು ಸಮಯ, ಬೆಂಗಳೂರಿಗೆ ಒಂದು ಸಮಯಂತಾದರೆ ಬಾರೀ ಸಮಸ್ಯೆ ಆದೆ. ಅದಕ್ಕಾಗಿ ಪ್ರತಿ ದೇಶದವು ಅವರವರ ದೇಶಕ್ಕೆ ಒಂದು ಕಾಲನ ಗೊತ್ತು ಮಾಡಿಕೊಂಡೊಳೊ. ನಾವು ಸಹ ಒಂದು ಕಾಲನ ಗೊತ್ತು ಮಾಡಿಕೊಂಡೊಳೊ. ಅದುವೆ ನಮ್ಮ ನಿರ್ಧಾರಿತ ಕಾಲ.

**ನಿರ್ಧಾರಿತ ಕಾಲ :-**

ನಾವು ನಮ್ಮ ದೇಶದ ಮೇಲೆ ಹಾದು ಹೋಗುವ ರೇಖಾಂಶ ರೇಖೆಗಳಲಿ 82.5 ಡಿಗ್ರಿ ಪೂರ್ವ ರೇಖಾಂಶ ರೇಖೆನ ಆಯ್ಕೆ ಮಾಡಿಕೊಂಡೊಳೊ. ಇದ್ ನಮ್ಮ ಮಧ್ಯಾಹ್ನ ರೇಖೆ. ಈ ರೇಖೆನ ಮೇಲೆ ಸೂರ್ಯ ಬಾಕನ ನಾವ್ಗೆ ಮಧ್ಯಾಹ್ನ ಗಂಟೆ 12 ಅಂತ ಲೆಕ್ಕ. (ಅಟ್ಲಾಸ್ ನೋಡಿ) ಒಂದು ದೇಶ ಮೂಡ ಪಡುವ ವಿಶಾಲ ಆಗಿದ್ದರೆ ಸಮಯಲೀ ಬಾರೀ ವ್ಯತ್ಯಾಸ ಆಗುವ ಕಾರಣ ದೇಶದೊಳಗೆ ಒಂದಕ್ಕಿಂತ ಹೆಚ್ಚಿಗೆ ಕಾಲ ಸಮಯಗಳ ಮಾಡಿಕಂಡವೆ. ಹಾಂಗಾಗಿ ಯು.ಎಸ್.ಎ. ಇಲ್ಲಿ ಮೂರು ಕಾಲ ವಲಯಗ ಉಟ್ಟು.

ಈಗ ನಾವ್ಗೆ ಸಮಯದ ಲೆಕ್ಕಾಚಾರ ಗೊತ್ತಾತ್. ಎಲ್ಲ ಗಡಿಯಾರ ತೋರ್ಸುದು ಸೆಕೆಂಡ್, ಮಿನಿಟ್ ಮತ್ತು ಗಂಟೆನ. ಎಲ್ಲ ತಾರೀಕು ಪಟ್ಟಿ ತೋರ್ಸುದು ದಿನ, ವಾರ, ತಿಂಗ, ವರ್ಷನ. ಇದ್ ನಮ್ಮ ನಾಗರಿಕ ಸಮಾಜಕ್ಕೆ, ಜೀವನಕ್ಕೆ, ಸಮ್ಮತ

ಆಗುಟು. ಆದರೂ ಇದ್ ನೂರಕ್ಕೆ ನೂರು ಸರಿ ಅಲ್ಲ. ಒಂದು ಚೂರು ವ್ಯತ್ಯಾಸ ಇದ್ದರೂ ನಿತ್ಯ ಜೀವನಕ್ಕೆ ಇಲ್ಲಿವರೇಗೆ ತೊಂದರೆ ಆತ್ಲೆ. ಬಾರಿ ಹಿಂದೆ ಕೃತ ಯುಗಲಿ 'ರೈವತ' ಎಂಬ ಋಷಿ ಇತ್ತ್ ಗಡ. ಅವಂಗೆ ಒಂದು ಪೊಲ್ಲುನ ಮಗಳ್ ಇತ್ತ್. ರೇವತಿ ಅಂತ ಅವಳ ಹೆಸ್ರ್. ಅವ್ಳಿಗೆ ಒಂದು ಹೈದನ ಹುಡ್ಕಿ ಹುಡ್ಕಿ ಸಾಕಾಗಿ ಕಡೆಗೆ ಅಲ್ಲಿ ಇಲ್ಲಿ ಹುಡ್ಕುದು ಏಕೆ ಸೃಷ್ಟಿ ಕರ್ತ ಬ್ರಹ್ಮ ಉಟ್ಟಲ್ಲ. ಅಂವ ಗೊತ್ತು ಮಾಡ್ದ ಹೈದ ಯಾರ್‌ಂತ ಕೇಳಿ ಬುಡೋನೊಂತೇಳಿ ತಡ ಮಾಡದೆ ಬ್ರಹ್ಮ ಲೋಕಕ್ಕೆ ಹೋಗಿ ತನ್ನ ಸಮಸ್ಯೆನ ಹೇಳಿಕಂಡತ್.

ಭೂಮಿಲಿರುವ ಎಲ್ಲ ಹೆಸ್‌ರ್ ಪಡ್ದವರ ಹೆಸ್‌ರ್ ಹೇಳ್. ನಾನ್ ನೆಂಪು ಮಾಡಿಕಣೆಂತ ಬ್ರಹ್ಮ ಹೇಳ್ತ್. ರೈವತ ಹೇಳ್ತ್. ಅಂವ ಹೇಳ್ದ ಹೆಸ್‌ರ್‌ಗಳ ಕೇಳಿ ಬ್ರಹ್ಮ ನೆಗಾಡ್ತ್. "ನೀನ್ ಹೇಳ್ದ ಹೆಸ್‌ರ್‌ನವು ಎಲ್ಲ ನೀನ್ ಹೊರ್ಟ್ ಬಾಕನ ಇದ್ದದ್ ನಿಜ. ಆದರೆ ನೀನ್ ಇಲ್ಲಿರುವ ಒಂದೊಂದು ಕ್ಷಣಲಿ. ನಿನ್ನ ಲೋಕದವುಕೆ ಲಕ್ಷಾಂತರ ವರ್ಷಗಳೇ ಕಳ್ದ್ ಹೋಗುಟು. ಹಾಂಗಾಂಗಿ ಅವು ಯಾರೂ ಈಗ ಇಲ್ಲೆ. ನೀನೀಗ ಭೂಲೋಕಕ್ಕೆ ಹೋಗು. ಆ ಹೊತ್ತಿಗೆ ಅಲ್ಲಿ ದ್ವಾಪರ ಯುಗ ನಡಿತಿದ್ದವೆ. ದ್ವಾರಕೇಲಿ ಬಲರಾಮ ಅಂತ ಒಬ್ಬ ಇದ್ದದೆ. ನಿನ್ನ ಮಗಳ್ನ ಅವಂಗೆ ಕೊಟ್ಟ್ ಮದುವೆ ಮಾಡ್" ಅಂತ ಹೇಳ್ತ್. ಇಲ್ಲಿವರೆಗೆ ಹೇಳ್ದ ಕಾಲದ ಲೆಕ್ಕಾಚಾರ ಎಲ್ಲ ನಮ್ಮ ಭೂಮಿಗೆ ಮಾತ್ರ ಆದೆ ಹೊರ್ತ್ ಇನ್ನಾವ ಗ್ರಹಕೋ, ಆಕಾಶ ಕಾಯಕ್ಕೊ ಆದುಲೆ ಅಂತ ಗೊತ್ತಿರೊಕು.

ಹಾಂಗಾದರೆ ಕಾಲಂತೇಳಿರೆ ಏನ್? ಭೂಮಿನ ಕಾಲನೇ ಬೇರೆ; ವಿಶ್ವ ಕಾಲನೇ ಬೇರೆ, ಸುಮಾರ್ ಎರ್ಡ್ ಸಾವಿರ ವರ್ಷಗಳ ಹಿಂದೆ ಒಬ್ಬ ಋಷಿ ಈ ಪ್ರಶ್ನೆ ಎತ್ತಿತ್ ಗಡ. ಕಡೆಗೆ ಅವನೇ ಮಾತ್ ಮುಂದುವರಿಸಿ, "ತಿಳ್ದವಂಗೆ ಇದರ ಉತ್ತರ ವಿವರಿಸಿದು ಅಗತ್ಯ ಇಲ್ಲೆ; ಗೊತ್ತಿದ್ದವಂಗೆ ತಿಳ್ಸದು ಕಷ್ಟ" ಅಂತ.


ಗ್ರಂಥ ಋಣ :

1. 'ಕಾಲ' ಪ್ರೊ. ಜಿ.ಟಿ. ನಾರಾಯಣ ರಾವ್.
2. The World Around us.

________ Reader's Digest


✍ಕುಯಿಂತೋಡು ದಾಮೋದರ

# ಹಿಮ ಕರಗುವಿಕೆ – ಜ್ವಲಂತ ವಿಚಾರ

ಜೀವಿಗಳಿಗೆ ಆಸರೆ ನೀಡಿರ್ವ ಏಕೈಕ ಗ್ರಹತೇಳ್ರೆ ಭೂಮಿ. ಬಾಹ್ಯಾಕಾಶಂದ ನೋಡಿರೆ ಸಸ್ಯ ಶ್ಯಾಮಲೆಯಾಗಿ, ನೀಲ ಗೋಳವಾಗಿ ಕಂಗೊಳಿಸ್ವ ನಮ್ಮ ಭೂಮಿ ಸಾವಿರಾರು ವರ್ಷಗಳಿಂದಲೂ ವೈವಿಧ್ಯಮಯ. ಕೋಟ್ಯಾಂತರ ಜೀವಿಗಳಿಗೆ ತನ್ನ ಒಡಲ್‌ಲಿ ಅನುಕೂಲಕರ ವಾತಾವರಣ ಕಲ್ಪಿಸಿ, ಅವುಗಳ ವಿಕಾಸಕ್ಕೆ ನೆರವಾಗುಟ್ಟು.



ಕೋಟ್ಯಾಂತರ ಜೀವ ಸಂಕುಲಗಳಿಗೆ ನೆಲೆ ನೀಡಿ ತನ್ನ ಒಡಲ್‌ಲಿ ನೂರಾರ್ ಹೊಳೆಗಳ್ನ, ಅರಣ್ಯನ, ಅದ್ಭುತ ಸೌಂದರ್ಯನ ಇಸಿಕೊಂಡುಟ್ಟು. ಇಂತಹ ಭೂಮಿ ಇಂದ್ ಅಪಾಯದ ಅಂಚಿಗೆ ಸಿಲುಕಿಟ್ಟುತ ವಿಜ್ಞಾನಿಗ ಹೇಳ್ತಾವಳೊ. ಮತ್ತೆ ಈ ಆತಂಕಕಾರಿ ವಿಷಯನ ವಿಜ್ಞಾನಿಗ ಒಪ್ಪಿಕಂಡೊಳೊ. ಇದಿಕ್ಕೆ ಮುಖ್ಯ ಕಾರಣತೇಳ್ರೆ ಭೂಮಿಯ ಏರುತಿರ್ವ ತಾಪಮಾನಂದಾಗಿ ಕರಗುತಿರ್ವ ಹಿಮರಾಶಿ. ಕರುಗತಿರ್ವ ಹಿಮಂದಾಗಿ ಇಂದ್ ನಮ್ಮ ಭೂಮಿ ವಿನಾಶದತ್ತ ಸಾಗುತ್ತಾ ಉಟ್ಟು.

**ಕರಗುತಿರ್ವ ಹಿಮ ಹಿಂಗೆತೇಳ್ರೆ ಎಂತ?**

ಕರಗುತಿರ್ವ ಹಿಮ ಇದ್ ಇಂದ್ ಪ್ರಸ್ತುತ ವಿಶ್ವ ಎದುರಿಸುತಿರ್ವ ಅತ್ಯಂತ ಜ್ವಲಂತ ಮತ್ತೆ ಗಂಭೀರ ಸಮಸ್ಯೆಯಾಗುಟ್ಟು. ಮನುಷ್ಯನ ಚಟುವಟಿಕೆಯಾದ ಅರಣ್ಯನಾಶ, ಮಿತಿಮೀರಿದ ಇಂಧನ ಬಳಕೆ, ಪರಿಸರ ಮಾಲಿನ್ಯ, ಅಣುಶಕ್ತಿ ಸ್ಥಾವರ ಮತ್ತೆ ಉಷ್ಣ ಸ್ಥಾವರಗಳ ಸ್ಥಾಪನೆಂದಾಗಿ ಭೂಮಿಯ ವಾತಾವರಣ ದಿನ ದಿನ ಕಳ್ದಂಗೆ ಬಿಸಿಯಾಗುತ್ತಾ ಉಟ್ಟು. ವಾತಾವರಣಲಿ ಕಾವು

ಏರುತಿರ್ವದರಿಂದಾಗಿ ಭೂಮಿನ ಧ್ರುವ ಪ್ರದೇಶಗಳಲಿರ್ವ ಹಿಮ ಪರ್ವತಲಿ ಶೇಖರಣೆಯಾಗಿರ್ವ ಮಂಜುಗಡ್ಡೆ ಕರಗುತ್ತಾ ಉಟ್ಟು. ಇದ್ರಂದಾಗಿ ಸಮುದ್ರದ ನೀರ್‌ನ ಮಟ್ಟ ಏರಿ ಪರಿಸರಲಿ ಅಸಮತೋಲನ ಆಗ್ತಾ ಉಟ್ಟು. ಪರಿಸರಲಿ ಸೂಕ್ಷ್ಮಾತಿಸೂಕ್ಷ್ಮ ಏರುಪೇರುಗ ಸಹ ಜೀವಿಗಳ ಮ್ಯಾಲೆ ನೆಟ್ಟಂಗೆ ಪರಿಣಾಮ ಬೀರ್‌ದೆಯಾದ್ರಂದ ಭೂಮಿನ ಕಾವು ಏರಿಕೆ ಇದೇ ಗತಿಲಿ ಮುಂದುವರ್ದರೆ ಜೀವಿಗಳ ವಿನಾಶ ನಿಶ್ಚಿತ.

**ಹಿಮ ಕರಗಿಕೆ ಕಾರಣಗ :**

ಇಂದ್ ಮನ್ಸ ತನ್ನ ಸ್ವಾರ್ಥಕ್ಕಾಗಿ, ಹಣದ ಆಸೆಗಾಗಿ ದುರಾಸೆಂದ ನಗರಾಭಿವೃದ್ಧಿ, ಕೈಗಾರಿಕೆ, ಆರ್ಥಿಕ ವಲಯ, ಕೃಷಿ ಹಿಂಗೆ ವಿವಿಧ ಹೆಸ್ರ್‌ಗಳ್‌ಲಿ ಮರಗಳ್ನ ಕಡ್ದ್ ಕಾಡ್‌ನ ನಾಶ ಮಾಡ್ತಾ ಉಟ್ಟು. ಹಿಂಗೆ ಮಿತಿಮೀರಿದ ಕಾಡ್‌ನಾಶಂದಾಗಿ ಮಳೆಲಿ ವ್ಯತ್ಯಯ ಆಗ್‌ತಿದ್ದ್ ಹವಾಮಾನ ವೈಪರಿತ್ಯ ಆಗ್ತಾವುಟ್ಟು.

**ಹಿಮ ಕರಗುದ್ರ್‌ಂದ ಆಗುವ ಪರಿಣಾಮಗ :**

ಭೂ ತಾಪಮಾನ ಏರಿಕೆ ಅಥವಾ ಗ್ಲೋಬಲ್ ವಾರ್ಮಿಂಗ್ ತೇಲ್ರೆ ಭೂಮಿ ಮತ್ತೆ ಸಾಗರಗಳ ಸರಾಸರಿ ಉಷ್ಣಾಂಶಲಿ ಏರಿಕೆ. ತಾಪಮಾನ ಏರುದ್ರಂದ ಆಗುವ ಕೆಲವು ಪರಿಣಾಮಗತೇಲ್ರೆ ಧ್ರುವಗಳ್‌ಲಿ ಮಂಜುಗಡ್ಡೆ ಕರಗುದು. ಇದ್ರಂದ ಸಮುದ್ರದ ನೀರಿನ ಮಟ್ಟ ಏರಿದೆ. ಮತ್ತೆ ಕರಾವಳಿಲಿ ನೆರೆ, ಸಮುದ್ರ ಕೊರೆತ, ಕುಡಿಯುವ ನೀರಿಗೆ ಹಾಹಾಕಾರ, ಹಂಗೆ ಹವಾಗುಣ ಬದ್ಲಾವಣೆಂದ ಮತ್ತೆ ಮತ್ತೆ ಅಪ್ಪಳಿಸ್ವ ಚಂಡಮಾರುತ, ಬಿರುಗಾಳಿ, ರೋಗ ರುಜಿನಗಳ ಹೆಚ್ಚಳ ಇತ್ಯಾದಿ.

**ಹಿಮ ಕರಗುವಿಕೆನ ತಡೆಗಟ್ಟುದು ಹೆಂಗೆ :**

ಭೂ ತಾಪಮಾನ ಏರಿಕೆಯ ಸಮಸ್ಯೆನ ತಡೆಗಟ್ಟಿರೆ ಹಿಮ ಕರುಗುದನ್ನ ತಡೆಗಟ್ಟಕ್. ಕಾರ್ಬನ್ ಡೈ ಆಕ್ಸೈಡ್‌ನಂತ ಅನಿಲಗ, ಮಿಥೇನ್, ಓಝೋನ್, ನೈಟ್ರಸ್ ಆಕ್ಸೈಡ್ ಇತ್ಯಾದಿ ಮತ್ತೆ ಹಸಿರ್‌ಮನೆ ಅನಿಲಗ ವಾತಾವರಣಲಿ ಹೊದಿಕೆನಂಗೆ ಸಂಗ್ರಹವಾಗ್ವದ್ರ್‌ಂದ ಇವು ಭೂಮಿಯ ಮೇಲ್ಮೈಂದ ಪ್ರತಿಫಲಿಸ್ವ ಸೂರ್ಯನ ಕಿರಣಗಳ ತಾಪನ ಹಿಡಿದಿಟ್ಟವೆ. ಇದ್ರಂದ ಭೂಮಿಯ ತಾಪಮಾನ ಏರಿಕೆ ಆದೆ. ಆದ್ರಂದ ಕಾರ್ಬನ್ ಇಂಧನಗಳಿಗೆ ಬದ್ಲಾಗಿ ನವೀಕರಿಸಿಕೆ ಸಾಧ್ಯ ಇರ್ವ ಇಂಧನ ಮೂಲಗಳ್ನ, ಹೊಂಗೆ ಮತ್ತೆ ಇತರ ಸಸ್ಯ ಜನ್ಯ ಇಂಧನಗಳ್ನ ಉಪಯೋಗಿಸಿ ಭೂಮಿಯ ತಾಪಮಾನನ ನಿಯಂತ್ರಿಸಕ್. ಇದ್ರಂದ ಹಿಮ ಕರಗುವಿಕೆನ ಪರಿಣಾಮಕಾರಿಯಾಗಿ ತಡೆಗಟ್ಟಕ್.

✍ ಕಟ್ರತನ ಲಲಿತಾ ಅಯ್ಯಣ

# "ನೆಂಪುನ ಕೊಂಡಿ"

1959 ನೇ ಇಸ್ವಿ ಕಾರ್ತಿಂಗ... ಅದ್ ಹಸ್‌ಕೂಸು, ನಂಗೆ ಎರ್‌ಡ್‌ವೊರೆ, ಅಣ್ಣಂಗೆ ಐದ್‌ವೊರ್ಸ. ನಮ್ಮಪ್ಪ ಚಾಂಪ, ಚಾಮೆವ್ವ ಅಂದರೆ ಅವ್ವ (ಅಮ್ಮನ) ನ ಅಪ್ಪ-ಅಮ್ಮ. ಇದಿಷ್ಟ್ ನಮ್ಮ ಸಂಪ್ಸಾರ ಆಗಿತ್ತ್. ನಮ್ಮ ಅಪ್ಪ ಅಂದ್‌ನ ಕಾಲಲಿ ಕನ್ನಡ ಜಿಲ್ಲೆಂದ ಕೊಡ್‌ಗ್‌ಗೆ ಒಬ್ಬನೇ ಬಂದಿದ್ದೊ.

ಅವ್ವ (ಅಮ್ಮ) ತಂಗೆ ಕೂಸುನ ಹೆತ್ತ್ ಸೊಯೆ ಇಲ್ಲದೆ ಮಲ್‌ಗಿಟ್ಟು. ಬಾಣ್ತಿಗೆ ಅದೆಂತದೋ ಚೆನ್ನಿ (ಸನ್ನಿ) ಮಿೂರ್‌ದ್‌ಗಡ. ಅವ್ವ ಸತ್ತೇ ಹೋತ್. ಇಪ್ಪತ್ತೆರ್ಡ್ ವೊರ್ಷಲಿ ಎಲ್ಲಾ ಮುಗ್ಸಿಕಂಣ್ತ್.

ನೆರೆಕರೆ ಇದ್ದೊವು ಬಂದ್ ಸೇರ್‍ದ್ದೊ. ಹೆಣ ಮಿೂಸಿಕೆ ಮಲ್ಗಿಸಿ, ಎರ್ಡ್ ಮೂರ್ ಹೆಣ್ಮಕ್ಕ ಮಿೂಸ್‌ತೊಳೊ. ಅಡ್ಡ ಹಿಡ್ದ ಸೀರೆ ಸೆರೆಲಿ ನಾನ್ ಇಣ್ಕಿ ನೋಡಿ, ಅವ್ವನ ಎಂತಕೆ ಮಿೂಸ್‌ತೊಳೋಂತಾ ಗೇನ ಮಾಡ್ದೆ. ಎಲ್ಲಾ ಕ್ರಿಯೆ ಆಗಿ ಚಟ್ಟ ಕಟ್ಟಿ ಹೊತ್ಕಂಡ್ ಹೋಕನ, ಅವ್ವನ ಎಲ್ಲಿಗೆ ತಕೊಂಡೋದುತಾ ನಾನ್ ಮರ್ಡ್ಕಿಕೆ ಸುರು ಮಾಡ್ದೆ. ಐದ್ ವೊರ್ಷದ ನನ್ನ ಅಣ್ಣ ನನ್ನ ತಬ್ಬಿಕಂಣ್ತ್. ಅಂವೊನೂ ಮರ್ಡ್ತುಟ್ಟು. ನಮ್ಮನ ಸಮಾಧಾನ ಮಾಡಿಕೆ ಚಾಮೆವ್ವ ತಂಗೆ ಕೂಸುನ ಹತ್ರ ಕುದ್ರಿಸ್‌ಕೊಂಡೊ. ಒಟ್ಟಿಗೆ ಮತ್ತ್ಯಾರೊ; ಮೂರ್‍ನಾಕ್ ಹೆಣ್ಮಕ್ಕ ಇದ್ದೊ. ಚಾಮೆವ್ವನೋ ಹುಟ್ಟು ಕಿವುಡಿ. ತಂಗೆ ಜಾಜಿನ ನೋಡಿ ನಾನ್ ಸುಮ್ಮನೆ ಕುದ್ದೆ. ಚೂಟುಕಳಕ್ಕೆ ಹೋದೊವು ವಾಪಾಸ್ ಬಂದ್ ಅವರವರ ಮನೆಗೆ ಹೋದೊ. ಮುಂದೆನ ಬಾಳ್ ದೇವ್ರಿಗೇ ಪ್ರೀತಿ!....

ತಂಗೆ ಕೂಸು ಹಾಂಗೇ ಹೀಂಗೆತಾ ನರ್ಕ ಬಂದ್‌ಕಂಡ್ ಹತ್ತ್ ತಿಂಗ ಬೊದ್ಕಿತ್. ಮತ್ತೆ ಅವ್ವ ಅವಳ್ನಸನ ತನ್ನ ಮಡಿಲಿಗೆ ಸೇರ್‍ಸಿಕಣ್ತ್. ಅದ್ ಒಳ್ಳೆದೇ ಆತ್ ಬುಡಿ. ಯಾಕೆಂತೇಳ್ರೆ ಗಂಡ್‌ಮಕ್ಕ ಹೆಂಗಾರ್ ಬೊದ್ಕುವೊ. ಅವ್ವ ಇಲ್ಲದ ಹೆಣ್ಣ್ ಮಕ್ಕ ಬೇರೆ ಅವ್ವನೊಟ್ಟಿಗೆ ಹೇಂಗೆ ಬೊದ್ಕುದು?

ನೋಡ್ಕನ ಹಾಂಗೇ ಆತ್. ನಂಗೆ ಐದ್ ವೊರ್ಷಾಕನ, ಅಪ್ಪ ನಮ್ಮನ ನೋಡ್‌ಕಂಬಕೆತ್ತೇಳಿ ಬೋಜವ್ವಂತೇಳ್ವ ಅವ್ವನ ಕೂಡೊಳಿ ಆದೊ. ಅಷ್ಟಾಕನ ನಮ್ಮೊವುಂತೇಳಿ ಇದ್ದ ಚಾಮೆವ್ವ ಸನ ತೀರ್ಕಂಡೊ.

ಮುಂದೆ ಹೇಳೊಕುತ್ತೇಳ್ರೆ ಬೋಜವ್ವನೊಟ್ಟಿಗೆ ನಾನ್, ನನ್ನಣ್ಣ ಹೇಂಗೆ ಬೊದ್‌ಕಿರುವೊತಾ ನೀವೇ ಊಹಿಸಿಕಣಿ ಬಲಾ...! ಮಕ್ಕಳ ವಯಸ್ಸ್‌ಲಿ ನಾವು ಅವ್ವನ ನೆನ್ಸಿಕಂಡ್ ಕಣ್ಣೀರ್‌ತೇಳುವ ಬಿಸಿ ನೀರ್‌ಲೇ ಮನ್ಸ್‌ಲಿ ಬೇಯ್ತಿದ್ದೊ. ಇಂತ ಬೊದ್ಕನ ಆ ದೇವ್ರು ಯಾರಿಗೂ ಕೊಡದಿರ್‍ಲೀತಾ ನಾನ್ ಬೇಡಿಕಣ್‌ತೊಳೆ..॥

✍ ಕಣಜಾಲ್ ಪೂವಯ್ಯ

# ಗಾಂಧೀಜಿಯ ನೆಂಪುಗ

ಮಹಾತ್ಮ ಗಾಂಧೀಜಿ ಹುಟ್ಟಿ 150 ವರ್ಸಗ ಆಗಿ ಹೋದರೂ ಸನ, ಅವರ ವಿಚಾರಧಾರೆಗ ಇಂದೂ ಕೂಡಾ ನಾವು ಪಾಲಿಸುವಂತದ್ದ್ ಮತ್ತೆ



ಗೌರವಿಸುವಂತದ್ದ್. ಅವರಂತ ಒಬ್ಬ ಮಹಾತ್ಮ ಒಂದು ಕಾಲಕಾಗಲೀ ಅಥವಾ ದೇಸಕ್ಕಾಗಲೀ ಸೀಮಿತ ವಾದವಲ್ಲ, ಅವೊಬ್ಬ 'ವಿಶ್ವಮಾನವ' ನಾಗಿ ಬೆಳ್‌ದೊ. ಮೋಹನ ದಾಸತ ಹೇಳ್‌ವ ಒಬ್ಬ ಹೈದನ ಮಹಾತ್ಮನಾಗಿ ಮಾಡ್‌ದ್ ಅವನತ್ರ ಇದ್ದಂತ ಸತ್ಯನ ಹುಡುಕುವ ಹಟಾತ ಹೇಳಕು. ಅದ್‌ಕೇ ಅವ್ ತನ್ನ ಸತ್ಯಶೋಧಕ ಅಂತ ಕರ್‌ದುಕೊಂಡೊ. ಅವರ ಬಗ್ಗೆ ತುಂಬಾ ಜನಕೆ ಗೊತ್ತಿಲ್ಲದೇ ಇರುವಂತ ಕೆಲವು ಸಂಗತಿಗಳ್‌ನ ನಾನಿಲ್ಲಿ ಹೇಳ್‌ನೆ.

ಗಾಂಧೀಜಿಗೆ ನಡ್ ಕಂಡ್ ಹೋದೂತ ಹೇಳ್‌ರೆ ಬಾರೀ ಕುಸಿಗಡ. ಹಂಗೇ ನಡ್‌ಕಂಡೇ ಅವು ಚಳುವಳಿ ಸಮಯಗಳ್‌ಲಿ ಹೋಗ್‌ತಾ ಇದ್ದರೆ ಸಾಕಡ, ಸಾವಿರಾರು ಜನಗ ಅವರ ಹಿಂದೇನೇ ಹೋತಿದ್ದೊಗಡ. ಹಿಂಗೆ ಅವು ಒಂದು ದಿನಲಿ 18 ಕಿ.ಮೀ ಗಳಷ್ಟು ಸರಾಸರಿ ನಡೀತಿದ್ದೊಗಡ. ಇದನ ಹೆಂಗೆ ಹೇಳುವೇತ ಹೇಳ್‌ರೆ ಅವು ಬದ್‌ಕಿದ ಸಮಯಲಿ ಸುಮಾರ್ 2 ಸಾರಿ ನಡ್‌ಕಂಡೇ ಇಡೀ ಪ್ರಪಂಚ ಸುತ್ತಿದ್ದಷ್ಟೇ ಆತಿತ್.

ಭಾರತ ದೇಸಕ್ಕೆ ಬಾಕೆ ಮೊದಲ್ ಅವು ದಕ್ಷಿಣ ಆಫ್ರಿಕಾದ ಸೇನೆ ಸೇರಿ ದುಡಿತಿದ್ದೊಗಡ. ಶಾಂತಿಗಾಗೇ ಬದ್‌ಕಿದ ಅವು ಹಿಂಗೆ ಸೇನೆಲಿದ್ದೋತ ಹೇಳಿರೆ ಆಶ್ಚರ್ಯ ಆದೆ.

ಗಾಂಧೀಜಿಗೆ ಬೇರೆ-ಬೇರೆ ಜನ್‌ರಿಗೆ ಕಾಗದ ಬರಿಯುವ ಅಭ್ಯಾಸ ಇತ್ ಗಡ. ಲಿಯೋ ಟಾಲ್‌ಸ್ಟಾಯ್, ಆಲ್ಬರ್ಟ್ ಐನ್‌ಸ್ಟೀನ್ ಮತ್ತೆ ಜರ್ಮನಿಯ ಸರ್ವಾಧಿಕಾರಿ ಅಡಾಲ್ಫ್ ಹಿಟ್ಲರ್ ಅವರೊಟ್ಟುಗೂ ಒಡನಾಟ ಇತ್ತ್‌ಗಡ. ಸ್ವಾತಂತ್ರ್ಯ ತಾಕೆ ಅಷ್ಟೆಲ್ಲಾ ಪೇಚಾಡ್‌ದ ಗಾಂಧೀಜಿ ನಮ್ಮ ದೇಸಕೆ ಸ್ವಾತಂತ್ರ್ಯ

ಸಿಕ್ಕ್‌ಕನ ಕಲ್ಕತ್ತಾದ ಒಂದು ಒತ್ತೊರ್ಮೆಲಿ ಭಾಗವಹಿಸಿಕೊಂಡಿದ್ದೊಗಡ.

1948 ರ ಜನವರಿ 30ಕ್ಕೆ ನಾಥೂರಾಮ್ ಗೋಡ್ಸೆ ಗುಂಡಿಗೆ ಬಲಿಯಾದ ಮಹಾತ್ಮನ ಅಂತ್ಯಕ್ರಿಯೆನ ಡೆಲ್ಲಿನ ರಾಜಘಾಟ್‌ಲಿ ನೆರವೇರಿಸಿದೊ. ಅವರ ಸಾವ್‌ನ ಸುದ್ದಿ ಕೇಳಿ ದೇಸದ ಮೂಲೆ ಮೂಲೆಂದ ಗುಂಪು ಗುಂಪ್‌ಲಿ ಬಂದ್ ಸೇರ್‌ದ ಜನರಿಂದಾಗಿ ಸುಮಾರು 8. ಕೀ ಮೀ ಗಳಷ್ಟು ಉದ್ದ ಜನರ ಸಾಲ್ ಇತ್ತ್‌ಗಡ.

ಗಾಂಧೀಜಿನತ್ರ ಯಾಗೋಳು ಒಂದು ಹಲ್ಲ್‌ನ ಸೆಟ್ ಇರ್‌ತಿತ್ತ್. ಉಂಬಕನ ಮಾತ್ರ ಅದರ ಅವು ಹಾಕಿಕಂಡ್, ಮತ್ತೆ ಲಾಯ್‌ಕಲಿ ತೊಳದ್ ಬಟ್ಟೆಲಿ ಮಡಸಿ ಇಟ್‌ಕಣ್‌ತಿದ್ದೊಗಡ.

ಬೆಂಗಳೂರ್‌ಲಿ ಎಂ.ಜಿ. ರೋಡೂತ ಹೇಳ್‌ರೆ ಯಾರಿಗೆ ಗೊತ್ತ್‌ಲೆ ಹೇಳಿ?

ನಮ್ಮ ದೇಸಲಿ ಸಣ್ಣ-ಪುಟ್ಟ ರಸ್ತೆಗಳ್‌ನ ಬುಟ್ಟರೂ ಸನ 50ಕ್ಕಿಂತ ಹೆಚ್ಚ ರಸ್ತೆಗಳ್‌ಗೆ ಮಹಾತ್ಮ ಗಾಂಧಿ ರಸ್ತೇತ ಹೆಸರಿಟ್ಟೊಳೊ, ಅದಿರ್‌ಲಿ ಹೊರ ದೇಸಗಳ್‌ಲೂ 48 ರಸ್ತೆಗ ಅವರ ಹೆಸ್‌ರ್‌ಲೇ ಒಳೊಗಡ.

ಬದ್‌ಕಿಕೆ ತಿನ್ನೊಕೇ ಹೊರ್ತು ತಿಂಬಕೆ ಬದ್‌ಕಿಕಾಗದೂತ ಗಾಂಧೀಜಿ ಹೇಳ್‌ತಿದ್ದೊ. ಎಂತನ ಹೇಳ್‌ದನೋ ಅದನೇ ಮಾಡಿ ತೋರ್‌ಸ್‌ತಿದ್ದೊ ಅವು ಎಷ್ಟು ಕಮ್ಮಿ ತಿಂಬಕಾದೇನೋ ಅಷ್ಟರ್‌ಲೇ ಬದ್‌ಕ್‌ತಿದ್ದೊ. ಎಷ್ಟೋ ಸಲ ಬರೀ ಹಣ್‌ಗಳ್‌ನ ತಿಂದ್‌ಕಂಡ್, ಆಡು ಹಾಲ್ ಕುಡ್‌ಕಂಡ್ ಕಾಲ ಕಳೀತಿದ್ದೊ. ನಾವು ತಿಂಬಂತ ಆಹಾರಲಿ ಕಾಲು ಭಾಗ ಮಾತ್ರ ನಾವ್ ಬದ್‌ಕಿಕೆ ಬೇಕಾದ್. ಇನ್ನುಳ್‌ದ ಮುಕ್ಕಾಲು ಭಾಗ ಡಾಕ್ಟರ್‌ಗಳ್‌ನ ಬದುಕಿಸಿಕೇತ ಹೇಳ್‌ವ ಕುಸಾಲ್ ಮಾತ್‌ನ ಒಳಗುಟ್ಟು ತಿಳ್‌ದು ಬದ್‌ಕಿದೊ ಗಾಂಧೀಜಿ.

ಪುಸ್ತಕಗಳ್‌ನ ಓದುದೂತ ಹೇಳ್‌ರೆ ಗಾಂಧೀಜಿಗೆ ಬಾರೀ ಕುಸಿ. ಕುತೂಹಲಂದ ಅನೇಕ ವಿಷಯಗಳ್‌ನ ಅವು ಓದಿ ತಿಳ್‌ಕನ್‌ತಿದ್ದೊ. ಮತ್ತೆ ಅದ್‌ರ ಬಗ್ಗೆ ಚರ್ಚೆ ಮಾಡ್‌ತಿದ್ದೊ. ಹಾಡು ಭಜನೆ ಕೂಡ ಅವ್‌ಕೆ ಬಾರೀ ಕುಸಿ ಕೊಡ್‌ತಿತ್ತ್. ಹಾಡ್‌ನ ರಾಗ-ತಾಳಗಳ ಬಗ್ಗೆ ಅವ್‌ಕೆ ಲಾಯ್‌ಕ ಗೊತ್ತಿತ್ತೂತ ಹೇಳ್‌ದು ಬಹಳ ಜನಿಗೆ ಗೊತ್ತಿತ್‌ಲೆ.

**ಪ್ರಪಂಚಲಿ ನೀವು ಎಂತದರ ಬದಲಾಗೊಕೂತ ಆಸೆ ಪಟ್ಟರೆನೋ ಅದು ಸುರೂಲಿ ನಿಮ್ಮಲ್ಲೇ ಆಕೂತ ಹೇಳ್ದವು ಅವು.**

ಬಡವರ ಕಷ್ಟಗಳ್‌ನ ಗಾಂಧೀಜಿ ಲಾಯ್‌ಕಲಿ ಅರ್ಥ ಮಾಡಿಕಂಡಿದ್ದೊ. ಅವರ ಬೇನೆಗಳ್‌ನ ನೆನ್‌ಸಿಕಂಡ್ ಸಂಕಟ ಪಡ್‌ತ್ತಿದ್ದೊ. ಅದ್‌ರಿಂದಾಗಿ ಗಾಂಧೀಜಿ ಬಡವರಂಗೆ ಸರಳ ಜೀವನ ನಡ್‌ಸಿದೊ. ಬಡಜನ್‌ರ ಉದ್ದಾರಕ್ಕಾಗಿ ದುಡ್‌ದೊ.

ಗಾಂಧೀಜಿ ಒಮ್ಮೆ ಒಂದ್ ಇಸ್ಕೂಲ್‌ಗೆ ಹೋದೊ. ಆಗ ಅವು ಒಂದು ತುಂಡು ಪಂಚೆನೂ, ಸಣ್ಣದೊಂದು ಶಾಲುನೂ ಹೆಗ್‌ಲ್ ಮೇಲೆ ಹಾಕಂಡಿದ್ದೊ. ಅಲ್ಲಿದ್ದ ಒಬ್ಬ ಹೈದ ಗಾಂಧೀಜಿನ ಕೇಳ್ತ್ ನೀವ್ ಯಾಕೆ ಅಂಗಿ ಹಾಕುದುಲೆ? ನಾ ಹೊಲ್‌ಸಿ ಕೊಟ್ಟರೆ ಹಾಕುವರಿಯಾ? ಖಂಡಿತಾ ಹಾಕಿನೆ. ನಾ ಒಬ್ಬನೆ ಅಲ್ಲಾ, ಎಲ್ಲಾವೂ ಹಾಕುವೇತ ಗಾಂಧೀಜಿ ನಗಾಡಿಕಂಡ್ ಹೇಳ್‌ದೊ.

ಆಗ ಹೈದ ನೀವ್‌ಗೆ ಎಷ್ಟ್ ಅಂಗಿ ಬೇಕಾದು? ನಾ ಅವ್ವಂಗೆ ಹೇಳಿ ಹೊಲ್‌ಸಿ ಕೊಟ್ಟನೆತ ಹೇಳ್‌ತ್. ಆಗ ಗಾಂಧೀಜಿ ಬರೇ ಒಂದೆರಡಲ್ಲ 40 ಕೋಟಿಗಿಂತ ಜಾಸ್ತಿ ಇದ್ದರೂ ಸಾಲ್ದುಲೆಪ್ಪಾತ ಹೇಳಿಕಂಡ್ ಅವನ ತಲೆಪೂಜಿ ಅಲ್ಲಿಂದ ಹೊರಟೊ.

ಗಾಂಧೀಜಿ ಎಂತನ ಹೇಳ್ತ್ತಿದ್ದೊನೋ ಅದನ ಮಾಡ್‌ದೊ. ಮಾಡ್‌ದನ ಹೇಳ್‌ದೊ. ಅವು ತಾನ್ ಮಾಡ್‌ದ ತಪ್ಪುಗಳ ಬಗ್ಗೆ ಎಲ್ಲೂ ಮುಚ್ಚುಮರೆ ಮಾಡದೆ ಬರ್‌ದಿಸಿಯೊಳೊ. ಒಂದು ಕಡೆ ಹೇಳ್‌ವೆ ನಾನ್ ನನ್ನ ಹೆಣ್ಣ್‌ನ ಅವಮಾನ ಮಾಡಿ ಬಾರೀ ತಪ್ಪು ಮಾಡ್ಯೊಳೆ. ಇದ್‌ನ ಗ್ಯಾನ ಮಾಡ್ರೆ ಬೇರೆಯವ್ ಬುಡಿ, ನನ್ನನ ನಾನೆ ಕ್ಷಮಿಸಿಕಾದ್ಲೆ?.

ಹಿಂಗೆ ಮಾಡಿದ ತಪ್ಪ್‌ನ ಎಲ್ಲವ್‌ಕೂ ಗೊತ್ತಾಗುವಂಗೆ ಪಶ್ಚಾತಾಪಲಿ ಒಬ್ಬ ಹೇಳ್‌ದೆ ಅಥವಾ ಬರ್‌ದು ಇಸಿದೆ ಅಂತ ಹೇಳ್‌ರೆ ಅದು ಗಾಂಧೀಜಿಯಂತ ಒಬ್ಬ ಮಹಾತ್ಮಂಗೆ ಮಾತ್ರ ಸಾಧ್ಯ. ಹಿಂಗಾಗಿಯೇ ಗಾಂಧೀಜಿ ತಾವೂ ಬೆಳ್‌ದೊ, ಪ್ರಜಾಪ್ರಭುತ್ವನ ಬೆಳ್‌ಸಿದೊ.

ಗಾಂಧೀಜಿಯ ಆತ್ಮಶಕ್ತಿ, ದೇಸಭಕ್ತಿ, ಬಡವರ ಮೇಲೆ ಕರುಣೆ ಇದೆಲ್ಲಾ ಗುಣಗಳ್‌ನ ನೋಡ್‌ಕನ ನಮ್ಮ ಹಿರಿಯ ಕವಿ ವಿ. ಸೀತಾರಾಮಯ್ಯ ಅವರ ಪದ್ಯದ ಸಾಲುಗ ನೆನಪಾದವೆ.

"ಮಣಿಯದಿಹ ಮನವೊಂದು, ಸಾಧಿಪವ ಛಲವೊಂದು
ನಿಜದ ನೇರಕೆ ನಡೆವ ನಿಶ್ಚಲತೆಯೊಂದು
ಅನ್ಯಾಯಕೆಂದೆಂದು ಬಾಗದೆಚ್ಚರವೊಂದು
ಕರುಣೆಗೂ, ಮರುಕಕ್ಕೂ ಚಿರಕೆರೆದ ಎದೆಯೊಂದು "

ಲಾಯ್ಕದ ಈ ಪದ್ಯದ ಸಾಲುಗ ನಿಜಕ್ಕೂ ಈ ಮಹಾತ್ಮಂಗೇ ಸರಿಯಾದೆ ಅಂತ ನಂಗೆ ಅನ್‌ಸ್‌ತಾ ಉಟ್ಟು.

**✍ಕೊಟ್ಟಕೇರಿಯನ ಲೀಲಾ ದಯಾನಂದ**

# ಫಿಟ್ಟ್ ಇಂಡಿಯಾಗೆ ಆಯ್ಕೆ :
# “ನನ್ನ ಪಾಲ್‌ನ ಸಿರಿಹೊತ್ತ್”

ಕೊಡಗು ಜಿಲ್ಲೆ ಮಡಿಕೇರಿ ತಾಲೋಕು ಬಲಮುರಿ ಗ್ರಾಮದ ಕಟ್ರತನ ಕೆ. ಬೆಳ್ಯಪ್ಪ 95 ವರ್ಷ ಪ್ರಾಯದವನಾದ ನಾನ್ ಮಡಿಕೇರಿ ಕೇಂದ್ರದ ಹಿರಿಯ ನಾಗರಿಕರ ವೇದಿಕೆಯ ಹಿರಿಯ ಸದಸ್ಯನಾಗಿ ಒಳೆ. ನಾನ್ ಹಿರಿಯನಾಗರಿಕರ ವೇದಿಕೆಯ 80 ವರ್ಷ ಪ್ರಾಯ ಮೇಲ್ಪಟ್ಟವರ ಪೈಕೀಲಿ ಕ್ರೀಡೆಲೀ ಜಾನಪದ ಕತೇಲಿ, ಸೆಟ್ಲ್‌ಕಾಕ್ ಮುಂತಾದ ಆಟೋಟಗಳಲ್ಲಿ ಪ್ರಥಮ ಬಹುಮಾನ ಗಳಿಸಿದ ವ್ಯಕ್ತಿ. ಹಂಗೆನೇ ನಂಗೆ ಜಿಲ್ಲಾ ಮಟ್ಟಲ್ಲಿಯೂ ಮತ್ತೆ ರಾಜ್ಯಮಟ್ಟದಿಂದಲೂ ಪ್ರಶಸ್ತಿ ಪತ್ರ ಮತ್ತೆ ಬಹುಮಾನ ಸಿಕ್ಕಿದ ಪ್ರಯುಕ್ತ, ಕೊಡಗ್‌ನ ಹಿರಿಯ ನಾಗರಿಕರ ವೇದಿಕೆನೂ ಮತ್ತೆ ಕೊಡಗ್‌ನ ಕ್ರೀಡಾ ಇಲಾಖೆ ಜಂಟಿಯಾಗಿ ನನ್ನ ಸಾಧನೆಗಳ್ನ ಮನಗಂಡ್ 2019 ನೇ ಇಸ್ವಿ ಆಗಸ್ಟ್ ತಿಂಗಳ 29 ನೇ ತಾರೀಕು ಗುರುವಾರ ಡೆಲ್ಲಿಲಿ ನಡೆವ ಪಿಟ್ಟ್ ಇಂಡಿಯ ಕ್ಯಾಂಪ್‌ಗೆ ಭಾಗಿಯಾಕೆ ಆಯ್ಕೆ ಮಾಡ್‌ದೊ.



ಅದೇ ತಿಂಗ ಆಗಸ್ಟ್ 24ನೇ ಶನಿವಾರ ಮಧ್ಯಾಹ್ನದ ಮೇಲೆ ಸುಮಾರು 2.30 ರ ಸಮಯಕ್ಕೆ ಮಡಿಕೇರಿ ಕ್ರೀಡಾ ಇಲಾಖೆಯ ಅಧಿಕಾರಿ ಶ್ರೀಮತಿ ರಮಾಮಣಿಯವು ನಂಗೆ ಫೋನ್ ಮೂಲಕ ಕರೆಮಾಡಿ, ನೀವು ಡೆಲ್ಲಿಗೆ ಹೋಕು, ಅಲ್ಲಿ 29ನೇ ತಾರೀಕು ಗುರುವಾರ ಫಿಟ್ ಇಂಡಿಯಾ ಉತ್ಸವ ನಡ್‌ದದೆ. ನೀವು 26ನೇ ಸೋಮವಾರ ನಮ್ಮ ಆಫೀಸಿಗೆ ಬಂದ್ ನಿಮ್ಮ ಬಯೋಡೆಟಾ, ಆಧಾರ್ ನಂ, ಜನನ ಸರ್ಟಿಫಿಕೇಟುಗಳನ್ನು ತಂದ್ ಕೊಡೊಕುಂತ ಹೇಳ್ಗೊ.

ಹಂಗೆನೇ ಸೋಮವಾರ ರೆಕಾರ್ಡ್‌ಗಳ್ನ ತಕ್ಕಂಡ್ ಹೋಗಿಕೊಟ್ಟೆ. ಆಗ ನಿಮ್ಮ ಜೊತೆಗೆ ಸಿ.ಯನ್. ಕಾಳಪ್ಪ ಮತ್ತೆ ಶ್ರೀಮತಿ ಸೀತಾ ಚೆಟ್ಟಿಯಪ್ಪನವು ಬಂದವೆಂತ ಹೇಳ್ಗೊ. ಹಂಗೆನೇ ಸ್ವಲ್ಪ ಹೊತ್ತ್ಲಿ ಅವು ಇಬ್ಬರುನೂ ಆಫೀಸಿಗೆ

ಬಂದೊ. ತಾ. 28ನೇ ಬುಧವಾರ ಮಧ್ಯಾಹ್ನದ ಒಳಗೆ ಡೆಲ್ಲಿಲಿ ಹಾಜರಾಕುಂತ ಅಧಿಕಾರಿಗ ಹೇಳಿದೊ. ಹಂಗೆನೇ ನಾವು 26ನೇ ಸೋಮವಾರ ಕುಶಾಲನಗರದ ಬುಕ್ಕಿಂಗ್ ಆಫೀಸ್ಲಿ ವಿಮಾನ ಪ್ರಯಾಣಕ್ಕೆ ಬುಕ್ ಮಾಡಿ ಟಿಕೇಟ್ ತಕ್ಕಂಡೊ. ಟಿಕೇಟು ತಲಾ ಒಂದರ ರೂ. ಹತ್ತು ಸಾವಿರ ಆಗಿತ್. ನನ್ನ ಜೊತೆಗೆ ನನ್ನ ಮೊಮ್ಮಗ ಲಿಕಿನ್ ಬೆಳ್ಯಪ್ಪನ ಕರ್ಕಂಡೆ. ನಮ್ಮ ಮೂರು ಜನಕ್ಕೂ ಅವನೇ ಗೈಡ್.

ತಾ. 27 ರ ಸಂಜೆ ಬಾಡಿಗೆ ಕಾರ್ಲಿ ಮೈಸೂರಿಗೆ ಪ್ರಯಾಣ ಮಾಡಿ, ಮೈಸೂರ್‌ಂದ ರಾತ್ರಿ ಬಸ್ಲಿ ಬೆಂಗಳೂರಿಗೆ ಹೋಗಿ ಮಾರಣೆ ದಿನ 28ಕ್ಕೆ ಬೆಳಿಗ್ಗೆ 10.30 ರ ವಿಮಾನ ಹತ್ತಿ ಮಧ್ಯಾಹ್ನ 1.15ಕ್ಕೆ ಡೆಲ್ಲಿ ತಲುಪಿದೊ. ಇಂದಿರಾಗಾಂಧಿ ವಿಮಾನ ನಿಲ್ದಾಣಕ್ಕೆ ನಾವು ತಲುಪಿದ ಕೂಡಲೇ ಕ್ರೀಡಾ ಇಲಾಖೆಯ ಕಾರ್ ಹತ್ತಿ, ಡೆಲ್ಲಿಯ ಅಶೋಕ ಹೊಟೇಲ್‌ಲಿ ನಾವು ವಾಸ್ತವ್ಯ ಮಾಡಿಕೆ ಇಲಾಖೆನವು ಎಲ್ಲಾ ಏರ್ಪಾಡ್ ಮಾಡಿದ್ದೊ. ಅಲ್ಲಿನ ಮಲಗುವ ರೂಂ, ಊಟೋಪಚಾರ ಎಲ್ಲವೂ ಬಹಳ ಪೊರ್ಲು ಆಗಿತ್. ಮಾರಣೆ ದಿನ 29ನೇ ಗುರುವಾರ ಬೆಳಗ್ಗಿನ ಕಾಫಿ ತಿಂಡಿ ಆದಾಂಗೆ ಕ್ರೀಡಾ ಇಲಾಖೆನವು ಸಮವಸ್ತ್ರ ತಂದ್‌ಕೊಟ್ಟೊ. ಹಂಗೇನೇ ನಾವು ಸಮವಸ್ತ್ರ ಡ್ರೆಸ್ ಮಾಡಿದ ಮೇಲೆ, ಹೊಟೇಲ್‌ಂದ ಕ್ರೀಡಾ ಇಲಾಖೆನವು ಅವರ ಕಾರ್‌ಲಿ ಇಂದಿರಾ ಗಾಂಧಿ ಒಳಾಂಗಣ ಕ್ರೀಡಾಂಗಣಕ್ಕೆ ಗೇಟ್‌ಪಾಸ್ ಮೂಲಕ ಒಳಗೆ ಹೋಗಿ ರಾಷ್ಟ್ರ ಪ್ರತಿನಿಧಿಗಳ ವೇದಿಕೆಲಿ ನನ್ನನ್ನ ಮುಂದಿನ ಸಾಲ್ಲಿ ಕೂರಿಸಿದೊ.

ಪೂರ್ವಾಹ್ನ 10.30 ಕ್ಕೆ ಸರಿಯಾಗಿ ಪ್ರಧಾನ ಮಂತ್ರಿ ನರೇಂದ್ರಮೋದಿಯವು ವೇದಿಕೆ ಆಸೀನರಾದೊ. ಹೆಸ್‌ರ್ ಹೇಳಿ ಸ್ವಾಗತ ಭಾಷಣ ಆದ ಕೂಡಲೇ ಫಿಟ್ಟ್‌ಗೆ ಸರಿಯಾಗಿ ಪ್ರದರ್ಶನಗಳ ಮೂಲಕ ಪ್ರದರ್ಶಿಕೆಗೆ ಸುರುಮಾಡಿದೊ. ಎಂದರೆ ಶಾಲಾ ಮಕ್ಕಳ ಮೂಲಕ, ಯುವಕ ಯುವತಿಯರ ಮೂಲಕ ಹಾಡುಗಾರಿಕೆ, ಕ್ರೀಡಾ ಚಟುವಟಿಕೆಗ, ಸ್ವಚ್ಛತೆಯ ಪ್ರದರ್ಶನ, ಯೋಗಗಳ ಪ್ರದರ್ಶನ, ಡಾನ್ಸ್‌ಗ, ಕಂಬಗಳ ಮೇಲೆ ಹತ್ತಿ ತಲೆ ಕೆಳಗಾಗಿ ಇಳಿಯುವಿಕೆ, ಹಗ್ಗಗಳ ಮೂಲಕ ಹಾರುದು, ಹಾಕಿ ಆಟ, ಕಬಡ್ಡಿಯಾಟ ಮುಂತಾದ ಆಟಗಳ ಮೂಲಕ ಪ್ರದರ್ಶನ ತೋರಿಸಿದೊ. ನಮ್ಮ ಭಾರತ ದೇಶ ಕ್ರೀಡೆಲಿ, ಆರೋಗ್ಯಲಿ, ವಿದ್ಯೇಲಿ, ಸಂಪತ್ಲಿ, ಸಂಗೀತ, ಸಾಹಿತ್ಯ, ಸಂಸ್ಕೃತಿಲೀ ಮುಂದುವರಿದ ದೇಶ ಆಕುಂತ ಹೇಳುದೇ ಇದರ ಉದ್ದಿಶ್ಯ. ಭಾರತ ದೇಶ ಎಲ್ಲಾ ರೀತಿಂದ ಸಮೃದ್ಧಿಯಾಗಿ ಪ್ರಪಂಚಲಿ ಮಾದರಿ ದೇಶ ಆಕುಂತಲೇ ಪ್ರಧಾನಿಯವರ ಅಭಿಲಾಷೆ. ಪ್ರದರ್ಶನಗಳ ಸರಮಾಲೆ ಮುಗಿದ ಮೇಲೆ ಪ್ರಧಾನಿಯೊಬ್ಬರೇ ಹಿಂದಿಲೀ ಸುಮಾರ್ ಅರ್ಧ ಗಂಟೆ ಭಾಷಣ ಮಾಡ್ಡೊ. ಲಕ್ಷಾಂತರ ಮಂದಿ ಗ್ಯಾಲರಿಲೀ ಕುದ್ಕಂಡ್

ವೀಕ್ಷಿಸುತ್ತಿದ್ದೊ. ವೇದಿಕೆಲೇ ಸುಮಾರು 40–50 ಮಂದಿ ಹಾಜರಿದ್ದೊ. ಭಾಷಣ ಮುಗಿದ ಮೇಲೆ ಪ್ರಧಾನಿ ನರೇಂದ್ರ ಮೋದಿಯವು ವೇದಿಕೆಂದ ಇಳ್ದ್ ನಮಿಗೆ ವಂದಿಸುತ್ತಾ ನನ್ನ ಹತ್ತಿರ ಬರ್‍ತಾ ಇರ್‍ಕನ ಪ್ರಧಾನಿಯವರ ಎರ್‍ಡ್ ಮುಂಗೈಗಳ್ನ ಹಿಡ್ಕಂಡೆ. ಹಿಡ್ಕಂಡ್ ನಾನ್ ಕೊಡ್ಗ್‍ಂದ ಬಂದೊಳೆ, ನನ್ನ ಹೆಸರ್ ಬೆಳ್ಯಪ್ಪ, ನನ್ನ ಪ್ರಾಯ 95, ಈಗ ನಡ್ದ ಸಂಗತಿ ಫಿಟ್ ಇಂಡಿಯಾ ಉತ್ಸವ, ನಾನ್ ಎಲ್ಲಾ ರೀತಿಲಿ ಫಿಟ್ಟ್ ಆಗಿ ಒಳೆಂತ ಅವರ ಕೈಗಳ ಮೇಲಕ್ಕೆ ಎತ್ತಿಕಂಡೇ ಹೇಳ್ದೆ. ನಾನ್ ಇಂಗ್ಲೀಷ್ ಭಾಷೆಲಿ ಹೇಳ್ದ್. ಆಗ ಅವು ಇಂಗ್ಲೀಷಲಿ ಬಹಳ ಒಳ್ಳೆದ್‍ಂತ ಹೇಳಿಕಂಡ್ ನೆಗಾಡಿಕಂಡ್ ನನ್ನ ಆರೋಗ್ಯನ ಕಂಡ್ ತುಂಬಾ ಖುಷಿಪಟ್ಟೊ. ನಾನ್ ಅವರ ಕೈ ಬುಟ್ಟ ಮೇಲೆ, ಅವು ಮುಂದೆ ಹೆಜ್ಜೆ ಹಾಕಿದೊ. ಇದ್ ಅವರ ದೊಡ್ಡ ಗುಣ. ಇದಕ್ಕೆ ನಾವು ಹೆಮ್ಮೆಪಡೋಕು. ಕೂಡಲೇ ನಟಿ ಶಿಲ್ಪಶೆಟ್ಟಿನವು ಬಂದ್ ನನ್ನ ಕೈ ಕುಲುಕಿ ನೆಗಾಡಿಕಂಡ್ ದಾಟಿದೊ.

ಆನಂತರ ಅಲ್ಲಿಯೇ ಒಂದು ಕಡೆ ಊಟೋಪಚಾರ ಆದ ಮೇಲೆ ಸುಮಾರ್ 3 ಗಂಟೆ ಹೊತ್ತಿಗೆ ಕ್ರೀಡಾ ಇಲಾಖೆನವು ಅವರ ಕಾರ್‍ಲೇ ಕರ್‍ಕಂಡ್ ಬಂದ್ ಅಶೋಕ ಹೊಟೇಲಿಗೆ ಬುಟ್ಟೊ. ಆ ದಿನ ಸಂಜೆ ನಾವು ನಾಲ್ಕು ಜನ ಸುಮಾರ್ 6–7 ಕಿ.ಮೀ ದೂರದ ಮಾರ್ಕೇಟಿಗೆ ಹೋಗಿ ಶಾಫಿಂಗ್ ಮಾಡಿಕಂಡ್ ವಾಪಾಸ್ ರೂಮ್‍ಗೆ ಬಂದೊ. ಆ ದಿನ ರಾತ್ರಿ ಊಟ ಮುಗಿಸಿ, ಸುಖನಿದ್ರೆ ಗೈದ್, ಬೆಳಿಗ್ಗೆ ಎದ್ದ್ ದೈನಂದಿನ ಕಾರ್ಯಕ್ರಮ ಮುಗಿಸಿಕಂಡ್ ಬೆಳಗ್ಗಿನ ಕಾಫಿ, ತಿಂಡಿ ಆದ ಮೇಲೆ ಬೆಳಗ್ಗಿನ 10.30 ರ ವಿಮಾನಕ್ಕೆಂತ ಬೆಳಗ್ಗೆ 8.30 ಕ್ಕೆ ರೂಂ ಖಾಲಿ ಮಾಡಿ ಕ್ರೀಡಾ ಇಲಾಖೆನವು ವಿಮಾನ ನಿಲ್ದಾಣಕ್ಕೆ ಕರ್‍ಕಂಡ್ ಬಂದ್ ಬುಟ್ಟೊ. ಆದರೆ ಆ ದಿನ 10.30 ರ ವಿಮಾನ ನಿಲ್ದಾಣಕ್ಕೆ ಬಾತ್ಲೆ. ಆನಂತರ ಅಪರಾಹ್ನ 3.00 ಗಂಟೆಗೆ ಏರ್ ಇಂಡಿಯಾ ವಿಮಾನ ಹತ್ತಿ ಸಂಜೆ 6.00 ಗಂಟೆಗೆ ಬೆಂಗಳೂರು ತಲುಪಿದೊ. ಕೂಡಲೆ 6.30 ಕ್ಕೆ ರಾಜಹಂಸ ಬಸ್ಸ್ ಹತ್ತಿ ಒಂದನೇ ತಾರೀಕು ಶನಿವಾರ ಬೆಳಗ್ಗಿನ ಜಾವ 4.00 ಗಂಟೆಗೆ ಮಡಿಕೇರಿಗೆ ತಲ್ಪಿದೊ. 5.00 ಗಂಟೆಗೆ ಮನೆ ಸೇರ್‍ದೊ.

ನಮ್ಮ ಖರ್ಚು ವೆಚ್ಚದ ಟಿಕೇಟುಗಳ್ನ ಮಾರನೆ ದಿನ ಮಡಿಕೇರಿ ಕ್ರೀಡಾ ಇಲಾಖೆಗೆ ಕೊಟ್ಟೊ. ಸುಮಾರ್ ಒಂದು ತಿಂಗಳ ಒಳಗೆ, ಬೆಂಗಳೂರು ಆಫಿಸ್‍ಂದ ನಮ್ಮ ಬ್ಯಾಂಕ್ ಖಾತೆಗೆ ಜಮಾ ಕೊಟ್ಟೊ.

✍ಕಟ್ರತನ ಕೆ. ಬೆಳ್ಯಪ್ಪ

"ಫಿಟ್ ಇಂಡಿಯಾ"ಕೆ ಆಯ್ಕೆಯಾದ
ಶ್ರೀ ಕೆ. ಬೆಳ್ಯಪ್ಪನವುಕ್ಕೆ "ಶಿಂಗಾರ" ಬಳಗದ
ಅಭಿನಂದನೆಗ – ಸಂ.

# ಪ್ರಕೃತಿನ ಋಣ ತೀರ್‌ಸುದು ಹೆಂಗೆ?

ಈ ಲೋಕಲಿ ನಮ್ಮ ಹೆತ್ತವರ, ವಿದ್ಯೆ ಬುದ್ಧಿ ಕೊಟ್ಟ ಗುರುಗಳ್‌ನ, ಹಂಗೆ ನಾವು ಹುಟ್ಟಿದಲ್ಲಿಂದ ಸಾಯುವ ಮುಟ್ಟ ಬಾಳಿ ಬದ್‌ಕ್‌ವ ಪ್ರಕೃತಿನ ಋಣ ತೀರ್‌ಸುದು ತುಂಬಾ ಕಷ್ಟ. ಯಾಕೆತ ಹೇಳ್‌ರ್ರೆ ನಾವು ಹುಟ್ಟಿದಲ್ಲಿಂದ ಹಿಡ್ದ್ ಸಾಯುವ ಮುಟ್ಟ ನಮ್ಮ ಎಲ್ಲಾ ಕೆಲ್ಸ ಕಾರ್ಯಗ ಈ ಪ್ರಕೃತಿಲೇ ನಡ್‌ದದೆ.

ಪ್ರಕೃತಿ ನಮಿಗೆ ದೇವುರು ಕೊಟ್ಟ ಉಡುಗೊರೆತ ಹೇಳ್‌ರ್ರೆ ತಪ್ಪಾಕಿಲೆ. ಹೊತ್ತಾರೆ ಎದ್ದ್ ರಾತ್ರೆ ಮಲಗುವ ಮುಟ್ಟ ಒಂದಲ್ಲ ಒಂದು ಕೆಲ್ಸಸನ ನಾವು ಪ್ರಕೃತಿಲೇ ಮಾಡಿವೆ. ಪ್ರಕೃತಿಲಿ ಮನಸ್ಸರ್ ಮಾತ್ರ ಅಲ್ಲಾ ಸಕಲ ಜಲಚರ ಜೀವಿಗ, ಪ್ರಾಣಿ, ಪಕ್ಷಿಗ ಆಸರೆ ಪಡ್‌ದೊಳೊ. ಪ್ರಕೃತಿನ ಪೊರ್ಲುನ ವರ್ಣ್‌ಸ್ಸಿಕೆ ಸಾಧ್ಯನೇ ಇಲ್ಲೆ. ಗಿಡ-ಮರಗ, ಪ್ರಾಣಿ-ಪಕ್ಷಿಗ, ಹೊಳೆ-ತೋಡುಗ ನಮಿಗೆಲ್ಲಾ ನೋಡಿಕ್ಕೆ ತುಂಬಾ ಖುಸಿ ಕೊಟ್ಟದೆ. ನಾವು ಪ್ರಕೃತಿನ ಲಾಯಿಕಾ ನೋಡಿಕಂಡಷ್ಟ್ ನಮಿಗೆ ಒಳ್ಳ ಗಾಳಿ, ಒಳ್ಳ ಆರೋಗ್ಯನ ಕೊಟ್ಟದೆ. ಯಾಗಳೂ ನಾವು ಪ್ರಕೃತಿನ ವಿಕೃತಿ ಮಾಡಕ್ಕಾದ್. ಅದರ್‌ಲ್ಲೂ ಕೊಡ್‌ಗ್ಗ್ ಪ್ರಕೃತಿನ ಪೊರ್ಲುಂದ ತುಂಬಿಟ್ಟು. ಇಲ್ಲಿನ ಬೆಟ್ಟ-ಗುಡ್ಡಗ, ಹೊಳೆ-ತೋಡುಗ ಭತ್ತದ ಗದ್ದೆಗ ಕಾಫಿತೋಟಗ ತುಂಬಾ ಲಾಯಿಕ್ಕಾ ಉಟ್ಟು. ನಮ್ಮ ಪಂಡ್‌ನ ಹಿರಿಯವು ಪ್ರಕೃತಿನ ದೇವುರಂತ ನಂಬಿಕಂಡ್ ಬದ್‌ಕಿಕಂಡ್ ಬಂದೊ. ಆದರೆ ಜನಸಂಖ್ಯೆ ಜಾಸ್ತಿಯಾದಂಗೆ ದಿನಂದ ದಿನಕ್ಕೆ ಮನ್‌ಸ್ಸ್‌ನ ಆಸೆಗ ಜಾಸ್ತಿಯಾತ್ತ್. ಬದ್‌ಕಿಕ್ಕೆ ಒಂದಲ್ಲ ಒಂದು ದಾರಿನ ಕಂಡ್ ಹಿಡಿಯಕ್ಕೆ ಸುರು ಮಾಡ್‌ದೊ.

ಮನ್‌ಸ್ಸನ ಆಸೆಗೆ ಮಿತಿನೇ ಇಲ್ಲೆತ ಹೇಳುವ ಮಾತ್‌ನಂಗೆ ಎಷ್ಟ್ ಇದ್ದರೂ, ಎಷ್ಟ್ ಕೊಟ್ಟ್‌ರ್ ಸಾಲದ ಆಸೆ. ಮನ್‌ಸ್ಸರ್‌ದ್ ಇನ್ನೂ ಬೇಕು, ಮತ್ತೂ ಬೇಕೂತ ಆಸೆಂದ ಪ್ರಕೃತಿ ಪೊರ್ಲುನ ದಿನಂದ ದಿನಕ್ಕೆ ಹಾಳ್ ಮಾಡ್‌ತ ಒಳೊ. ಆದರೆ ಪ್ರಕೃತಿ ಮಾತ್ರ ಯಾವುದಕ್ಕೂ ಬೇಜಾರ ಮಾಡಿಕಣದೆ ನಮ್ಮ ತಪ್ಪುನ ಮಾಪು ಮಾಡಿಕಂಡ್ ನಮ್ಮ ಸಾಕಿಕಂಡ್ ಹೋದೆ.

ಇಂದ್ ನಾವು ನೋಡ್‌ತ್ತಿರುವಂಗೆ ಕಂಡ ಕಂಡಲ್ಲಿ ಅದರ್‌ಲೂ ಕೊಡ್ಗ್‌ಲಿ ಹೋಮ್‌ಸ್ಟೇ, ರೆಸಾರ್ಟ್‌ಗ ಮಿತಿ ಮೀರಿ ಬೆಳಿತ ಒಳೊ. ಯಾರ ಬಾಯಿಲೂ ಕೇಳ್‌ರು ಹೋಮ್ ಸ್ಟೇ, ರೆಸಾರ್ಟ್‌ತ ಹೇಳಿವೆ. ಅದನ ಕಟ್ಟಕನ ಇದ್ದ ಬರೆನೆಲ್ಲ ತಗ್‌ದ್ ಅಗ್‌ದ್ ಹಾಳ್ ಮಾಡಿ ಇದ್ದ ಮರಗಳ್‌ನ ಎಲ್ಲಾ ಕಡ್‌ದ್ ಬೋಳು ಮಾಡಿವೆ. ಆಗ ಪ್ರಕೃತಿಗೆ ತುಂಬಾ ಪೆಟ್ಟ್ ಬಿದ್ದದೆ.

ನಮ್ಮ ಹಿರಿಯರ ಕಾಲಲಿ ಲಾಯಿಕ್ಕಾ ಇದ್ದ ಪ್ರಕೃತಿ ಇಂದ್‌ನ ದಿನಗಳ್‌ಲಿ

ಹೊಸ ಹೊಸ ಆಸೆಗಳ್‌ಂದ ಸುಮಾರ್ ಕಾಫಿ ತೋಟಗ, ಭತ್ತದ ಗದ್ದೆಗ ಹೋಮ್‌ಸ್ಟೇಗೆ ಬಲಿಯಾಗ್‌ತ ಉಟ್ಟು. 'ಅಪ್ಪ ನೆಟ್ಟ ಆಲದ ಮರ ಮಗನ ಕಾಲಕ್ಕೆ ಬರಿಯ ಬುಡ'ತ ಹೇಳುವ ಗಾದೆ ಮಾತ್‌ನಂಗೆ ನಮ್ಮ ಹಿರಿಯವು ಕಷ್ಟಪಟ್ಟ್ ಭತ್ತದ ಗದ್ದೆಗಳ್‌ನ ಮಾಡ್‌ದೊ. ಆದರೆ ಇಂದ್ ಕೊಡ್ಗ್‌ಲಿ ಸುಮಾರ್ ಕಡೆಗಳ್‌ಲಿ ಗದ್ದೆಗ ಎಲ್ಲಾ ಒಂದಲ್ಲ ಒಂದು ಕಾರಣಕ್ಕೆ ಬಲಿಯಾಟು. ಸೈಟ್‌ಗಳಾಂಗೆ ಮಾಡಿ ಮಾರಿ ಮಣ್ಣ್ ತುಂಬ್‌ಸಿ ಮನೆಗಳ್‌ನ ಕಟ್ಟ್‌ತ ಒಳೊ. ಯಾವ ಉದ್ದೇಶಕ್ಕೆ ಹಿರಿಯವು ಮಾಡ್‌ದೊ ಅದೇ ಉದ್ದೇಶಕ್ಕೆ ಬಳ್‌ಕೆಯಾದರೆ ಲಾಯಿಕ್. ಅದ್ ಬುಟ್ಟ್ ಗದ್ದೆಗಳ್‌ಲಿ ಮನೆಕಟ್ಟಿಕೆ ಹೋದರೆ ಕಟ್ಟಿ ಮಡ್‌ಗಿದ ಬುತ್ತಿನ್ತೇ. ಅಪಾಯ ತಪ್ಪಿದಲ್ಲ.

ಪ್ರಕೃತಿ ಸೃಷ್ಟಿಯಾಕನ ಯಾವ ಕಾಲಕ್ಕೆ ಹೆಂಗೆ ಹೆಂಗಲ್ಲ ಆಕುತ ಹಂಗೆ ಸೃಷ್ಠಿಯಾಟು. ಅದ್‌ಕೆ ಹೊಂದಿಕಂಡ್ ಮನಸ್ಸರ್ ನಾವು ಸಹ ಬದ್‌ಕೊಕು. ಅದ್ ಬುಟ್ಟು ಇಲ್ಲದ ಆಸೆಗೆ ಪ್ರಕೃತಿನ ಬಲಿಕೊಡ್‌ದು ಸರಿಯಲ್ಲ. ಮಳೆಗಾಲಲಿ ಮಳೆ, ಬೇಸಿಗೆಲಿ ಬಿಸ್‌ಲ್, ಚಳಿಗಾಲಲಿ ಚಳಿ ಇದೆಲ್ಲ ಪ್ರಕೃತಿ ನಿಯಮ. ಅದನೆಲ್ಲ ಯಾರ ಕೈಲೂ ಬದ್‌ಲ್‌ಸಿಕ್ಕೆ ಸಾಧ್ಯ ಇಲ್ಲೆ. ಹೆಂಗೆ, ಹೆಂಗೆಲ್ಲ ನಡ್‌ಕಂಡ್ ಬಂದುಟ್ಟು ಹಾಂಗೆಲ್ಲ ಹೋಗ್‌ತ ಇದ್ದದೆ.

ಇಂದ್‌ನ ದಿನಗಳ್‌ಲಿ ಭೂಮಿಲಿ ಮನ್‌ಸ್ಸನ ಆಸೆಗ ಜಾಸ್ತಿಯಾದಂಗೆ ಪ್ರಕೃತಿ ಸಹ ಬೇಜಾರ್‌ಲಿ ವಿಕೃತಿಯಾಕೆ ಸುರಾವುಟ್ಟು. ಕಾಲಂದ ಕಾಲಕ್ಕೆ ಹವಾಮಾನ ವೈಪರಿತ್ಯ ಆಗ್‌ತ ಉಟ್ಟು. ಇದರ್‌ಂದ ನಾವು ಮನಸ್ಸರ್ ಮಾತ್ರ ಅಲ್ಲ, ಪ್ರಾಣಿಗ ಸಹ ಕಷ್ಟನ ಅನ್‌ಭವಿಸ್‌ತ ಒಳೊ.

ಬೇಸಿಗೆಲಿ ಕಾಡ್‌ನ ಕಡ್ದ್ ಕಾಫಿ ತೋಟ ಮಾಡ್‌ದು ಇಲ್ಲೆ ಕಾಡಿಗೆ ಬೆಂಕಿ ಕೊಡ್‌ದು ಮಾಡಿವೆ. ಆಗ ಕಾಡ್‌ಲಿ ಇದ್ದ ಪ್ರಾಣಿಗ ಎಲ್ಲಾ ನಾಡ್‌ನ ಕಡೆಗೇ ಹೊರ್‌ಟವೆ. ಆಗ ಪ್ರಕೃತಿ ವಿಕೋಪದ ಕಡೇ ಮುಖ ಮಾಡ್‌ದೆ.

ಕೊಡ್‌ಗ್ ಸುಮಾರ್ ಪ್ರವಾಸಿ ಜಾಗಗಳಿಗೆ ಹೆಸಾರಾವುಟ್ಟು. ಆದರೆ ಇಂದ್ ಕೊಡ್‌ಗ್‌ಗೆ ಬರುವ ಪ್ರವಾಸಿಗರು ಪ್ರಕೃತಿನ ಪೊರ್ಲುನ ಹಾಳ್‌ಮಾಡ್‌ತ ಇರ್‌ದನ ನಾವು ದಿನ ನೋಡ್‌ತ ಒಳೊ. ಕಂಡ ಕಂಡಲ್ಲಿ ಕಡ್ಯೆದು, ಹೊಳೆಗಳಿಗೆ ಹಾಳ್ ಮೂಳುನ ಬಿಸಾಕ್‌ದು ಹಿಂಗೆಲ್ಲ ಮಾಡಿವೆ. ಎಷ್ಟ್ ಹೇಳ್ರುರು ಜನ್‌ರಿಗೆ ಅರ್ಥ ಆಲೆ. ಇದ್ ತುಂಬಾ ಬೇಜಾರದ ವಿಷಯ.

ನಾವು ಮನ್‌ಸರ್ ಮರಗಳ್‌ನ ಬೇಕಾದಷ್ಟ್ ಕಡ್‌ದವೆ. ಆದರೆ ಅದೇ ಮರಗ ಸಿಟ್ಟ್‌ಲಿ ನೆರ್‌ಳ್‌ನ ಕೊಡ್‌ದನ ನಿಲ್ಸಿವೆನ? ಹೊಳೆಗಳಿಗೆ ಕಸ-ಕಡ್ಡಿಗಳ್‌ನ ಹಾಕಿವೇತ ಅದೇ ಹೊಳೆಗ ಹರಿಯೋದನ ನಿಲ್ಸ್‌ವೆನ? ಇದನೆಲ್ಲ ನಾವು ಮನ್‌ಸ್ಸರ್

ತಿಳ್‌ಕಂಡ್ ಅರ್ಥ ಮಾಡಿಕಂಡ್ ಬದ್‌ಕೊಕು.

ಇಷ್ಟಗಂಟ ಪ್ರಕೃತಿ ಮನ್ಸರಿಗೆ ಯಾವುದನ ಕಮ್ಮಿ ಮಾಡ್‌ತ್‌ಲೆ. ಬದ್‌ಕಿಕೆ ಬೇಕಾದಷ್ಟ್ ಒಳ್ಳ ಗಾಳಿನ, ಕುಡಿಯಕ್ಕೆ ಬೇಕಾದ ನೀರ್‌ನ ಕೊಟ್ಟತ್ತ್. ಲಾಯಿಕ್ಕಾ ಹೊಂದಿಕಂಡ್ ಇದ್ದ ಪ್ರಕೃತಿಗೆ ಅದೇನತೋ ಗೊತ್ತೆ ಆಗಸ್ಟ್ ತಿಂಗಳಲ್ಲಿ ಮಾರಿ ಮಳೆ ಬಿದ್ದ್ ಪ್ರಕೃತಿ ವಿಕೋಪ ಆಗಿ ಎಷ್ಟೋ ಜನ್‌ರ ಜೀವನ ಹಾಳಾತ್.

ಇದ್ದಕ್ಕಿದ್ದಂಗೆ ಬಿದ್ದ ಮಾರಿ ಮಳೆಗೆ ಕೊಡ್ಗ್‌ನ ಅದೆಷ್ಟೋ ಗ್ರಾಮಗ, ಎಷ್ಟೋ ಕಾಫಿ ತೋಟಗ, ಲೆಕ್ಕ ಹಾಕಿಕಾಗದಷ್ಟ್ ಜಾಗಗ ಸುಮಾರ್ ಮನೆಗ, ರಸ್ತೆಗ ಕೊಚ್ಚಿ ಹೋಗಿ ಗುರುತೇ ಹಿಡಿಯಕ್ಕೆ ಆಗದಂಗೆ ಊರ್‌ಗೆ ಊರೇ ಕೊಚ್ಚಿ ಹೋಟು.

ಇಷ್ಟಗಂಟ ಕೈ ಎತ್ತಿ ಕೊಡ್‌ತಿದ್ದ ಕೊಡ್ಗ್‌ಗೆ ಈಗ ಕೈ ಒಡ್ಡಿ ತಕಣುವ ಪರಿಸ್ಥಿತಿ ಬಂದ್ ಹೋತ್. ಹೊರಗಡೆನವು ಕೊಡ್‌ಗ್‌ನ ಕಷ್ಟಕ್ಕೆ ಕೈ ಜೋಡ್‌ಸಿ ನಿಲ್ಲುವಂಗೆ ಆತ್. 'ಮಾಡಿದುಣ್ಣೊ ಮಾರಾಯತ' ಹೇಳುವ ಗಾದೆ ಮಾತ್‌ನಂಗೆ ನಾವು ಮಾಡುವ ತಪ್ಪುಗ ಕೆಲವೊಮ್ಮೆ ನಮಿಗೆ ಅರ್ಥ ಆತ್ತೆ. 'ಕೆಟ್ಟ ಮ್ಯಾಲೆ ಬುದ್ಧಿ ಬಾತ್'ತ ಹೇಳುವಂಗೆ ಒಂದು ಸಲ ಆದ ಮ್ಯಾಲೆ ಬುದ್ಧಿ ಬಂದದೆ. ಪ್ರಕೃತಿನ ಮುಂದೆ ನಾವು ಏನು ಇಲ್ಲೆ. ಒಂದು ಗಳಿಗೆ ಗಟ್ಟಿ ಮನ್‌ಸ್ಸ್ ಮಾಡ್ರೆ ಲೋಕನೇ ಮುಳುಗುವಷ್ಟ್, ಮುಳುಗುಸುವಷ್ಟ್ ಶಕ್ತಿನ ಪ್ರಕೃತಿ ಪಡ್‌ಕೊಂಡುಟ್ಟು. 'ಹುಟ್ಟು ನಿಶ್ಚಿತ ಸಾವು ಖಚಿತ' ತ ಹೇಳುವಂಗೆ ನಾವು ಈ ಮಣ್ಣ್‌ಲಿ ಹುಟ್ಟಿದಲ್ಲಿಂದ ಸಾಯುವ ಮುಟ್ಟ ಪ್ರಕೃತಿಲೇ ಆಟ ಆಡಿವೆ. ಯಾವುದೇ ಕಾರಣಕ್ಕೂ ಪ್ರಕೃತಿನ ವಿಕೃತಿ ಮಾಡಿಕೆ ಹೋಕಾದ್. ಕೊಡ್ಗ್‌ಲಿ ಈ ವರ್ಷ ಬಿದ್ದ ಮಾರಿ ಮಳೆ ಮತ್ತೆ ಪ್ರಕೃತಿ ವಿಕೋಪ ಒಂದು ಒಳ್ಳ ಸಂದೇಶನ ಎಚ್ಚರಿಕೆನ ಕೊಟ್ಟ್‌ಟ್ಟು. ನಾವು ಎಷ್ಟು ಕಷ್ಟಪಟ್ಟರು ಪ್ರಕೃತಿನ ಋಣನ ತೀರ್‌ಸಿಕ್ಕೆ ಸಾಧ್ಯನೇ ಇಲ್ಲೆ. ಇರುವಷ್ಟ್ ದಿನ ಪ್ರಕೃತಿನ ಹಾಳ್ ಮಾಡದೇ ಲಾಯಿಕ ಬದ್‌ಕಿ ನಮ್ಮ ಮುಂದೆನ ಪೀಳಿಗೆಗೆ ಉಳ್‌ಸಿ ಬೆಳ್‌ಸಿಕ್ಕೆ ಪ್ರಯತ್ನ ಪಡ್‌ನೊ.

✍ **ಉಳುವಾರನ ರೋಶನ್ ವಸಂತ್**

ಕಾಂತೂರು–ಮೂರ್ನಾಡು.

# ಹಿಂಗಾರನ ಹಿಗ್ಸಿದ ಜಯರಾಮಣ್ಣ..



ಶ್ರೀ ಪಿ.ಸಿ. ಜಯರಾಮ ನಮ್ಮ ಅರೆಬಾಸೆ ಅಕಾಡೆಮಿಗೆ ಮೂರ್ನೆ ಗುರ್ಕಾರ. ಗುರ್ಕಾರ ಆದ ಮೇಲೆ ಹತ್ತಾರ್ ಬೇರೆ ಬೇರೆ ಯೋಜನೆಗಳ ಹಾಕ್ಕಂಡೊ. ಅದರ್ಲಿ ಒಂದು ಹಿಂಗಾರನ ಹಿಗ್ಗುಸುದು. ಅದೆಲ್ಲಾ ಆಕಿಲ್ಲೆಂತ ಕೆಲೊವು ಹೇಳ್ರೆ, ದುಡ್ಡ್ ಕೊಟ್ಟ್ ಯಾರೂ ತಕಾಂದ್ಲೆಂತ ಇನ್ನ್ ಕೆಲವೊ ಹೇಳ್ದೊ. ನಮ್ಮೊವು ಚರ್ಚೆ ಇಲ್ಲದೆ ಯಾಪಾರ ಮಾಡ್ದು ಅಬ್ಕಾರಿ ಇಲಾಖೆನೊಟ್ಟಿಗೆ ಮಾತ್ರ. ಅದ್ಕೆ ಎಸ್ಟ್ ಬೇಕಾರೂ ಕೊಟ್ಟವೆ, ಪುಸ್ತಕ ಮಾತ್ರ ಯಾರಿಗೂ ಬೇಡ. ಒತ್ತಾಯ ಮಾಡಿ ಕೊಟ್ಟರೂ, ಮೆಲ್ಲ ಒಮ್ಮೆ ನೋಡಿ ಹಾಂಗೆ ಮೇಜಿ ಮೇಲೆ ಇಸುವೆ. ಇಂತದರ ಎಡೆಲಿ ಜಯರಾಮಣ್ಣ ಹಿಂಗಾರನ ಸಾವಿರ ದಾಟ್ಸಿದೊ. ಇದ್ ಸಣ್ಣ ಸಂಗತಿ ಅಲ್ಲ. ಜಯರಾಮಣ್ಣ ಜಯಶಾಲಿ ಆದೊ.

ಎಲ್ಲಾ ಅಕಾಡೆಮಿಗೊಳೂ ತಿಂಗ ಮೂರು ತಿಂಗಳ ಕಂತ್‌ಲಿ ಜರ್ನಲ್‌ಗಳ ತಂದವೆ. ಹಾಂಗೆನೇ ಅರೆಬಾಸೆ ಎಕಾಡೆಮಿ ಹಿಂಗಾರಂತೇಳುವ ಹೆಸ್ರ್‌ಲಿ ಮೂರು ತಿಂಗೊಳುಗೆ ಒಂದರಂಗೆ ವರ್ಸಕ್ಕೆ ನಾಲ್ಕ್ ಪುಸ್ತಕನ ಪ್ರಿಂಟ್ ಮಾಡ್ತಾ ಬಂದದ್ ನಾವುಗೆಲ್ಲಾ ಗೊತ್ತುಟು. ಮೂರು ವರ್ಸಕ್ಕೆ ಬರೇ 200 ರೂಪ್ಯಾ, ಘರ್ಷಕ್ಕೆ 4 ರ ಹಾಂಗೆ ಮೂರು ವರ್ಸಲಿ 12 ಪುಸ್ತಕ ಅಕಾಡೆಮಿನ ಕರ್ಚಿಲಿ ಮನೆ ಬಾಗ್ಲಿಗೆ ಬಂದದೆ. ಇದ್ ಅರೆಬಾಸೆಲಿ ಸಾಹಿತ್ಯ ಹುಟ್ಸಿಕೆ ಮತ್ತೆ ಅಚ್ಚ್ ಹಾಕ್ಸಿ ಜನಂಗಳಿಗೆ ಕೊಡುವ ಉದ್ದೇಶ ಇರುವ ಒಂದು ಒಳ್ಳ ಯೋಜನೆ. ಈ ಯೋಜನೆಗೆ ಬಿತ್ತ್ ಹಾಕಿದ್ ಎಕಾಡೆಮಿನ ಸುರುನ ಅಧ್ಯಕ್ಷರಾಗಿದ್ದ ಎನ್ನಸ್ ದೇವಿಪ್ರಸಾದರ ಕಾಲಲಿ. ಆಗ ಅದ್ಕೆ 'ಸುರಗಿ'ಂತ ಹೆಸ್ರಿತ್ತ್. ಈ ಹೆಸ್ರ್‌ಲಿ ಒಂದ್ ಪುಸ್ತಕ ಬಂದ್ ಅದೊಂದು ದಾಕ್ಲೆ ಆತ್. ಆಮೇಲೆ ನಮ್ಮ ಕೊಲ್ಯದ ಗಿರೀಶರ್ ಅಧ್ಯಕ್ಷರಾದೊ. ಬಾರೀ ದುಡ್ಡ್ ಕರ್ಚಿಮಾಡಿ ಒಳ್ಳೊಳ್ಳೆ ಪುಸ್ತಕಗಳ ಅಚ್ಚ್ ಹಾಕ್ಸಿದೊ. ಸುರಗಿನ ಹೆಸ್ರ್‌ನ 'ಹಿಂಗಾರ'ಂತೇಳಿ ಬದ್ಲ್ ಮಾಡಿದೊ. ಹಿಂಗಾರಂತೇಳಿರೆ ಅಡ್ಕೆ ಹುಟ್ಸುವ ಹೂ. ಗೌಡ್ರ ಪೈಕಿ ತುಂಬಾ ಜನ ಅಡ್ಕೆನ ನಂಬಿ ಬೊದ್ಕೊವು. ಅದ್ ಅರ್ಳ್‌ಕನ ಜೇನ್ನೆಳಗ ಎಲ್ಲಿದ್ದರೂ ಓಡೋಡಿ ಬಂದವೆ. ಪೂಂಬಳೆ ಬಿಡ್ದ್ ಅರ್ಳುವ ಹಿಂಗಾರನ ನೋಡಿಕೆ ಪೊರ್ಲು. ಸುರ್ಗಗೂ ಹಿಂಗಾರಕ್ಕೂ ಬೇರೆಯವರ ಆಕರ್ಷಣೆ ಮಾಡುವ

ಶಕ್ತಿ ಉಟ್ಟು. ಈ ಎರ್ಡ್ ಹೂವುಗಳೂ ಮರದ ಮೈಮೇಲೆ ಹುಟ್ಟುವ ಹೂವುಗ. ಪುರ್ಸ ದೆವ್ವಕ್ಕೆ ಸುರ್ಗ್ಗಂತೇಳಿರೆ ಬಾರೀ ಇಸ್ಟ, ಹಾಂಗೆ ಬಚ್ಚನಾಯ್ಕಂಗೆ ಕಾಮಕಸ್ತೂರಿ ಸೊಪ್ಪು!

ಹೀಂಗೆ ಹಿಂಗಾರ ಮೂರು ತಿಂಗೊಳಿಗೊಮ್ಮೆ ಪೊರ್ಲುಲಿ ಬಾಕೆ ಸುರಾತ್. ಅದರ ರೂಪ ಬದ್ಲಾತ್. ಪುಸ್ತಕದ ಮೋರೆಲಿ ಸರ್ಕಾರದ ಮೋರನು, ಎಕಾಡೆಮಿನ ಮೋರನೂ ಬೀತ್. ಆ ಕಾಲಲಿ ಸದಸ್ಯರಾಗಿದ್ದ ಮೋಹನ ಸೋನಾಂತೇಳುವ ಕಲಾವಿದ ಲ್ಯಾಕನ ಮೋರನ ಮಾಡಿಕೊಟ್ಟೊ. ಮತ್ತೆ ಎಲ್ಲಾ ಹಿಂಗಾರದ ಮೋರೆ ವಿನ್ಯಾಸ ಬಾರೀ ಪೊರ್ಲುಲಿ ಬಂದುಟು. ಹಿಂಗಾರಕ್ಕೆ ಸಂಪಾದಕ ಆಗಿದ್ದ ನಮ್ಮ ಕಣಿಯೂರು ಪೂವಪ್ಪನೊವು ತುಳು ಗೌಡ ಆಗಿ ಹುಟ್ಟಿರೂ ಅರೆಬಾಸೆ ಗೂಡೆನ ಮೊದ್ವೆ ಆಗಿ, ಎಕಾಡೆಮಿಗೆ ಸದಸ್ಯನೂ ಆಗಿ ಅರೆಬಾಸೆ ಸಾಹಿತ್ಯಕ್ಕೆ ಬಾರೀ ಕೊಡುಗೆ ಕೊಟ್ಟೊವು. ಹಿಂಗಾರನ ಬಾರೀ ನಿಷ್ಠೆಂದ ಅರ್ಲುವ ಹಾಂಗೆ ಮಾಡ್ಯೊಳೊ. ಅಲ್ಲಿ ಇಲ್ಲಿ ಒಸಿ ಒಸಿ ಬರ್ಯೆತಿದ್ದವರ ಒತ್ತಾಯ ಮಾಡಿ ಬರ್ಸಿ ಬುಡಾದೆ ಹಿಂಗಾರ ಪ್ರಿಂಟ್ ಆಗುವ ಹಾಂಗೆ ಮಾಡ್ಯೊಳೊ. ಅವರ ಕಾಲಲಿ ಹಿಂಗಾರಕ್ಕೆ 183 ಜನ ಚಂದಾದಾರರಾಗಿ ಓದೊವರ ಸಂಖ್ಯೆ ವಿಸ್ತಾರಕೆ ಸುರಾತ್. ಒಂದಷ್ಟ್ ಜನ ಅರೆಬಾಸೆಲಿ ಬರ್ಯಕೆ ಸುರುಮಾಡ್ದೊ. ಇವರ ಕಾಲಲಿ ಹಿಂಗಾರಕ್ಕೆ ಚಾಲನೆ ಸಿಕ್ಕಿತ್.

ಆ ಮೇಲೆ ನಮ್ಮ ಜಯರಾಮಣ್ಣ ಎಕಾಡೆಮಿಗೆ ಗುರ್ಕಾರ ಆಗಿ ಬಂದೊ. ರಾಸಿ ಬಿದ್ದ ಪುಸ್ತಕಗಳ ನೋಡಿ ಇದರ ಆಫೀಸ್‌ನ ಗೋಡಾನ್‌ಲಿ ಇಸಿಕಂಡ್ ಏನ್ ಮಾಡ್ದು, ಪುಸ್ತಕ ಜನರ ಕೈಗೆ ಸಿಕ್ಕುವಾಂಗೆ ಆಕು. ಸರ್ಕಾರದ ದುಡ್ಡುಲಿ ಮೂರು ತಿಂಗಳಿಗೊಮ್ಮೆ 500 ಪುಸ್ತಕಗ ಪ್ರಿಂಟಾತ ಇತ್ತ್. ಅದರ್ಲಿ 183 ಪೋಸ್ಟ್‌ಲಿ ಚಂದಾದಾರರಿಗೆ ಹೋತಿತ್ತ್. ಒಳ್ದದ್ ಹಾಂಗೆ ಇರ್ತಿತ್. ಇದಲ್ಲದೆ ಆ ಹಿಂದೆನ ಅಧಿಕಾರಲಿದ್ದೊವು 15 ಅರೆಬಾಸೆ ಪುಸ್ತಕಗಳ ಪ್ರಿಂಟ್ ಮಾಡಿದ್ದೊ. ಅದೂ ಸೇಲಾಗದೆ ರಾಶಿ ಬಿದ್ದಿತ್ತ್. ಜಯರಾಮಣ್ಣ ಈ ಪುಸ್ತಕಗಳ ಓದೊವುಕೆ ಮುಟ್ಸುವ ಉದ್ದೇಶಂದ ಶಾಲೆ ಶಾಲೆಗಳಿಗೆ ಹೋಗಿ ಹಂಚುವ ಕೆಲ್ಸ ಮಾಡ್ದೊ. ಜೊತೆಗೆ ಹಿಂಗಾರಕ್ಕೆ ಚಂದಾದಾರರ ಹಿಗ್ಗುಸುವ ಕೆಲ್ಸಕ್ಕೆ ಕೈ ಹಾಕಿದೊ. ಯಾವುದೇ ಕಾರ್ಯಕ್ರಮಕ್ಕೆ ಹೋದರೂ ಅವರ ಕಾರ್‌ಲಿ ಪುಸ್ತಕದ ಅಟ್ಟಿನೂ ಕೈಲಿ ರಶೀದಿ ಪುಸ್ತಕನೂ ಇರ್ತಿತ್. ಎಲ್ಲಾ ಸದಸ್ಯರೂ ನೂರು ನೂರು ಚಂದಾ ಮಾಡೊಕೂತ ಹೇಳ್ದೊ. ಅರೆಬಾಸೆಲಿ ಬರ್ಯವುನೂ ಹೆಚ್ಚೊಕು, ಓದೊವುನೂ ಹೆಚ್ಚೊಕು. ಇದ್ ಎಕಾಡೆಮಿನ ಸುರೂನ ಕೆಲ್ಸ ಆಕು. ಸಾಹಿತ್ಯ ಹುಟ್ಟೊವು, ಅದರ ಓದೊವು ಬೆಳ್ದರೆ ಮಾತ್ರ ಎಕಾಡೆಮಿ ಸಾರ್ಥಕ ಆದೆಂತ ಹೇಳ್ತಾ ಬಂದೊ. ಹಿಂಗಾರಕ್ಕೆ

ನಮ್ಮ ಹೊಸ ಸದಸ್ಯ ಆಗಿದ್ದ 'ಚಾಂಪಾ ಖ್ಯಾತಿನ' ಬಾರಿಯಂಡ ಜೋಯಪ್ಪನವರ ಸಂಪಾದಕಾಂತ ಮಾಡ್ದೊ. ಪೂವಪ್ಪ ಕಣಿಯೂರ್ ಸುರು ಮಾಡ್ದ ಹಿಂಗಾರದ ಕೆಲ್ಸನ ಜೋಯಪ್ಪ ಮಾಸ್ಟ್ರ ಮತ್ತೂ ಲ್ಯಾಕ್ ಮಾಡಿ ಮುಂದುವರ್ಸಿಕಂಡ್ ಬಂದೊ. ಸಾಮಾನ್ಯವಾಗಿ ಎಕಾಡೆಮಿಗಳ್ಲಿ ಸಂಪಾದಕನ ಹುದ್ದೆ ಒಂದು ವರ್ಸ ಮಾತ್ರ. ಆದರೆ ಮಾಸ್ಟ್ರಿಗೆ ಸಮ ನಿಲ್ಲೊವು ಬೇರೆ ಇಲ್ಲೆಂತ ಹೇಳಿ ಅವ್ವೆ ಹಿಂಗಾರಕ್ಕೆ ಸಂಪಾದಕರಾಗಿ ಮುಂದುವರ್ದೊ. ಸಾಹಿತ್ಯ ತರ್ಸಿಕಂದು, ಬರ್ಸುದು, ಅದರ ಟೈಪು ಮಾಡ್ಸುದು, ತಿದ್ದುದು ಎಲ್ಲನೂ ಮಾಸ್ಟ್ರ ಲ್ಯಾಕ್‌ಲಿ ಮಾಡ್ತಾಬಂದೊ. ಜಯರಾಮಣ್ಣ ಹಠ ಬುಡದೆ ಚಂದಾ ಮಾಡ್ತಾ ಬಂದೊ. ಅವರ ಕಾರ್ಯಕ್ಷೇತ್ರ ಸೊಸೈಟಿಗಳೂ, ಸಾರ್ವಜನಿಕ ಸಭೆ ಸಮಾರಂಭಗ. ಎಲ್ಲೇ ಹೋದ್ರೂ ರಶೀದಿ ಪುಸ್ತಕ ಕೈಲೇ ಇರ್ತಿತ್, ಜಯರಾಮಣ್ಣ ರಶೀದಿ ಬರ್ದಾಕೂರೆ ಅವರೊಟ್ಟಿಗಿದ್ದ ಡ್ರೈವರ್ ವಾಸಣ್ಣ ಕಾರ್‌ಂದ ಪುಸ್ತಕ ತಂದ್ ಕೊಡ್ತಾ ಹೋದೊ. ನಾವೆಲ್ಲಾ ನೋಡ್ತಾ ಇದ್ದಾಗೆ ಮಾಮೂಲಾಗಿ ಪ್ರಿಂಟ್ ಆಗ್ತಿದ್ದ 500 ಪುಸ್ತಕಗ ಖಾಲಿ ಆದೊ, ಕೂಡ್ಲೆ ಐನೂರರ ಬದ್ಲಿಗೆ ಒಂದು ಸಾವಿರ ಪ್ರಿಂಟ್ ಮಾಡಿಕೆ ತೀರ್ಮಾನ ಮಾಡ್ದೊ. ಇದ್ದ 18 ತಿಂಗಳ ಅವಧಿಲಿ ಚಂದಾದಾರ ಸಂಖ್ಯೆ ಸಾವಿರದ ಹತ್ರಕೆ ಎತ್ತಿತ್. ಈ ನೊಡುಲಿ, ಅವು ಕಾಯಿಲೆ ಬಿದ್ದೊ. ಇಲೆಕ್ಷನ್ ಬಾತ್, ಕೊಡ್ಗುಲಿ ಗುಡ್ಡೆ ಜರ್ದ್ ತಿಂಗಳ ಕಟ್ಲೆ ಮಾರ್ಗ ಬಂದ್ ಆತ್. ಆದರೂ ಜಯರಾಮಣ್ಣನ ಕೈಲಿ ರಶೀದಿ ಪುಸ್ತಕ ತೊಪ್ಪುತಿತ್ಲೆ. ಇವರ ಬುಟ್ರೆ, ನಮ್ಮ ಹಾಲೆಮಜ್ಲ್ ದಿನೇಶ ಸೆಂಚುರಿ ದಾಟ್ಸಿ ಚಂದಾದಾರರ ಮಾಡಿ ಎರಡ್ನೆ ಸ್ಥಾನಕ್ಕೆ ಬಂದೊ.

ಇಂದ್ ಹಿಂಗಾರ ಹಿಗ್ಗಿ 903 ಚಂದಾದಾರರ್ ಒಳೊ. ಇದರ ಹಿಂದೆ ಚಲಬುಡದ ಜಯರಾಮಣ್ಣನ ಸಾಧನೆನೇ ದೊಡ್ಡದ್. ಮುಂದೆ ಬರುವ ಅಧಿಕಾರಸ್ಥರ್‌ಗೆ ಆ ಸಂಖ್ಯೆನ ಇಂಗ್‌ಸದೇ ಹಿಗ್ಗಿಕಂಡ್ ಹೋವ ಜವಾಬ್ದಾರಿ ಉಟ್ಟು. ಹಾಂಗೆನೇ ನಮ್ಮೊವು ಅಬ್ಕಾರಿ ಇಲಾಕೆಗೆ ಕೊಡುವಂತ ದುಡ್ಡುಲಿ ಒಂದು ಪಾಲ್ ಹಿಂಗಾರಕ್ಕೂ ಕೊಟ್ಟ್ ಬಾಸೆನ ಅಭಿವೃದ್ಧಿಗೆ ಕೆಲ್ಸ ಮಾಡೊಕು.

**–ಎ.ಕೆ. ಹಿಮಕರ,**
ಬಂಟಮಲೆ.

# ತಾರಸಿ ತೋಟಲಿ "ಪೀರೆ"

ಬಿರ್ದ್‌ಗಳ ಸರ್ದಾರ ತಾರಸಿ ತೋಟದ ಕೃಷಿಕ ಡಾ. ಕೃಷ್ಣಪ್ಪ ಗೌಡ ಪಡ್ಡಂಬೈಲು –ಇವರ ಹೆಸ್ರ್‌ನ ಕೇಳದೋವು ಇರಿಕಿಲ್ಲೆ. ರಾಜ್ಯ ಮಟ್ಟದ ದೇಸ-ಪರ್ದೇಸದ ಬಿರ್ದ್‌ಗಳ ಇವು ಪಡ್ದೊಳೊ. ಇವು ತಮ್ಮ ಮನೆನ ತಾರಸಿ ಮೇಲೆ ತರತರದ ನೆಟ್ಟಿಕಾಯಿಗಳ, ಮೊದ್ದ್‌ನ ದೈಗಳ, ಹಣ್ಣ್ ಹಂಪಲ್ ದೈಗಳ, ಗೆಂಡೆ–ಗೆಣ್ಸ್‌ಗಳ, ಅಪ್ರೂಪದ ಹೂನ ದೈಗಳ ಬೆಳ್ಸಿ ಎಲ್ಲರ್‌ಂದಲೂ 'ಸೈ' ಎನ್ಸಿಕೊಂಡೊವು. ಎಲ್ಲದರ್‌ಂದಲೂ ಹೆಚ್ಚಿನ ಬಿರ್ಸ್‌ತ್ತಿಕೆ ತೋರ್ಸಿದ್ ಇವರ 'ಬತ್ತ'ದ ಕೃಷಿ. ಮನೆ ತುಂಬುಸಿಕೆ ಬೇಕಾದ ತೆನೆಗ ಇವ್ಕೆ ಸಿಕ್ಕದ ಕಾರ್ಣ ಇವು ತಮ್ಮ ತಾರಸಿ ಮೇಲೆ ಮಳ್ಗಾಲ ಬತ್ತನ ಬೆಳ್ಸಿಕೆ ಸುರು ಮಾಡ್ದೊ. ಅದರ್‌ಂದ ಅವ್ಕೆ ಮನೆತುಂಬುಸಿಕೆ ತೆನೆನೂ ಸಿಕ್ಕಿತ್, ಹಂಞ ಮಟ್ಟ್‌ನ ಕರ್ಚಿಗೆ ಬೇಕಾದ ಬತ್ತನೂ ಸಿಕ್ಕಿತ್. ಇವು ಇದರೆಲ್ಲಾ ಬೆಳ್ಸುದು ತಮ್ಮ ಮೊನ್ಸ್‌ನ ಕುಸಿಗಾಗಿ, ಹೊತ್ತು ಕಳ್ಯಕಾಗಿ ಹೊರ್ತು ಮಾರಿ ದುಡ್ಡು ಮಾಡಿಕಾಗಿ ಅಲ್ಲ. ನೆರೆಕರೆಯವ್ಕೆ, ಮನೆಗೆ ಇವರ ಬಿರ್ಸ್‌ತ್ತಿಕೆನ ನೋಡಿಕೆ ಬಂದೊವ್ಕೆ ಇವು ಇದರೆಲ್ಲಾ ಹಂಚ್‌ತಿದ್ದೊ. ಇದ್ ಇವರ ದೊಡ್ಡಗುಣ.



ಈ ಸಲ ಇವು ಒಂದ್ ಹೊಸ ಬಗೆನ ನೆಟ್ಟಿಕಾಯಿನ ತಮ್ಮ ತಾರಸಿ ತೋಟಲಿ ಬೆಳ್ಸಿಯೊಳೊ. ಇದರ ಅರೆಬಾಸೆಲಿ 'ಪೀರೆ' ಎಂತ, ಕೊಡ್ಗ್, ಸಕ್ಲೇಶಪುರದ ಕಡೆ ಜನಂಗ 'ಮಡ್ಗಲಕಾಯಿ' ಎಂತ ಕರ್ದವೆ.

ಎಸ್ಟೋ ಜನಕ್ಕೆ ಈ 'ಪೀರೆ' ನ ಸಂಗತಿ ಗೊತ್ತಿರಿಕಿಲ್ಲೆ. ಹಿಂದೆನ ಕಾಲಲಿ ಕಾಡ್‌ಗೆ ಸೊಪ್ಪು ತಾಕೋ, ಸೊಯ್ದೆ ತಾಕೋ ಹೋವ ಜನಂಗ ಕಾಡ್ ಮರಕ್ಕೆ ಹಬ್ಬಿಕಂಡಿದ್ದ ಬೊಳ್ಳಿಲಿ ನೇಲಿಕಂಡಿದ್ದ ಈ ಪೀರೆಕಾಯಿಗಳ ಕೊಯ್ದ್ ತಂದ್

ಗೈಪು ಮಾಡಿಕೆ ಸುರು ಮಾಡ್ದೊ. ಅದರ ರುಚಿಗೆ ಮಾರ್ ಹೋಗಿ ಅದ್ ಕಾಡ್‌ಲಿ ಎಲ್ಲಿ ಇದ್ದರೂ ಹುಡ್ಕಿ ತಾತಿದ್ದೊ. ಎಲ್ಲೊವೂ ಅದರ ಹಿಂದೆ ಬಿದ್ದ ಕಾರ್ಣ ಎಸ್ಟೋ ಜನಕ್ಕೆ ಅದ್ ಸಿಕ್ಕದಂಗಾತ್. ಆಗ ಹಂಞ ಜನಂಗ ಅದರ ತಮ್ಮ ಹಿತ್ಲ್‌ಲಿ ಬೆಳ್ಯಕೆ ಸುರುಮಾಡ್ದೊ. ಅದರ ಬೇಡಿಕೆ ಹೆಚ್ಚಾಕನ ಅದರ ಮಾರಿ ದುಡ್ಡು ಮಾಡಿಕೆ ಸುರುಮಾಡ್ದೊ. ಈಗ ಪೀರೆಗೆ ನೆಟ್ಟಿಕಾಯಿ ಅಂಗ್ಡಿಗಳ್ಳಿ ಕೆ.ಜಿ. ಒಂದಕ್ಕೆ ನೂರ ಎಂಭತ್ತರ್‌ಂದ ಇನ್ನೂರು ರೂಪಾಯಿ ಮುಟ್ಟ ಉಟ್ಟುಗಡ. ಇಂತಾ ಅಪ್ರೂಪದ ನೆಟ್ಟಿ ಬೆಳೆನ ಡಾ. ಕೃಷ್ಣಪ್ಪ ಗೌಡ್ರು ತಮ್ಮ ತಾರಸಿ ತೋಟಲಿ ಬೆಳ್ಸಿ ಎಲ್ಲರ ಹೆಗ್ಗಳ್ಕೆಗೆ ಪಾತ್ರರಾಗೊಳೊ.

ತಮ್ಮ ಮನೆನ ಸೂರಡಿ ಅಡಿಲಿ ಹೂವುನ ಚೆಟ್ಟಿಗಳ್‌ಲಿ ಬೀಜ ಬಿತ್ತಿ ದೈ ಮಾಡಿ, ಬೊಳ್ಳಿಗಳ ತಾರಸಿ ಮೇಲೆ ಹಬ್ಬುಸಿ ಪಲನ ಪಡ್ದೊಳೊ. ಅದರ್ಲಿ ಬುಟ್ಟ ಹೂವು, ಕಾಯಿಗಳ ಹಿಡ್ದ್ ನೋಡಿ ಅವುನೂ, ಅವರ ಹೆಣ್ಣ್ ಮೀನಾಕ್ಷಕ್ಕನೂ ಕುಸಿ ಪಟ್ಟೊಳೊ. ಅದರ ಬಗ್ಗೆ ಹಂಞ ಪಟಗಳ ನೀವ್ಗೆ ಕಳ್ಸ್ಯೆ. ನೀವೂ ನೋಡಿ ಕುಸಿ ಪಡಿನಿ.

✍ ಎಂ.ಜಿ. ಕಾವೇರಮ್ಮ
"ನಿಸರ್ಗ" ಮಾವಜಿ,
ಸುಳ್ಯ ದ.ಕ.

## "ಹಿಂಗಾರ" ಚಂದಾದಾರರ ತಿಳಿವಳಿಕೆಗೆ

ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ ಆಗ್‌ವ 'ಹಿಂಗಾರ' ಪತ್ರಿಕೆನ ಎಲ್ಲವು ತುಂಬ ಅಭಿಮಾನಂದ ತಕಂಡ್ ಪ್ರೋತ್ಸಾಹಿಸೊಕು. ನೀವೆಲ್ಲವು ಅದರ ಸದಸ್ಯತ್ವ ಪಡ್‌ಕಣೊಕು. ಅದರ ತ್ರೈವಾರ್ಷಿಕ ಚಂದಾ ದರ ರೂ. 200.00 ಆಗುಟು. ಬಿಡಿ ಪತ್ರಿಕೆಗೆ ರೂ. 20.00. ಸದಸ್ಯರಾದವುಕೆ ಪತ್ರಿಕೆನ ಅಂಚೆಲಿ ಕಳ್ಸಿವೆ. ನಿಮ್ಮ ಪರಿಚಯಿಸ್ತರಿಗೆ ಸದಸ್ಯರ್ ಆಕೆ ದಯಮಾಡಿ ಹೇಳಿ. ಆಜೀವ ಸದಸ್ಯತ್ವಕ್ಕೆ ರೂ.600.00

## ಅನುಭವ

# 'ಕಳ್ದದರ ಗ್ಯಾನ ಮಾಡ್ದೇ ಕುಸಿ!'

ಸಾಧಾರಣ ಎಪ್ಪತ್ತು ವರ್ಷ ಹಿಂದೆ ಏನೆಲ್ಲ ನಡ್ತ್ಂತ ಬರೆಯುತ್ತವಳೆ. ನಾನ್ ಎರಡ್ ಮೂರು ವರ್ಷದ ಕೂಸು ಆಗಿರಕನ ಸೀಮೆಣ್ಣೆ ದೀಪದ ಬೆಳಕ್ ಕಾಂಬದ್. ದೇವರ ದೀಪ ಹಿಂಗೆ ಹೊತ್ತ್‌ತ್ತಿತ್ತ್‌ತ ಗ್ಯಾನ ಬಾದು. ಹಂಗೆಲ್ಲ ನನ್ನ ಕಣ್ಣಿಗೆ ಕಾಂಬತ್ತಿತ್ತ್. ನನ್ನ ತವರು ಮನೆ ಕಟ್ಟೆಮಾಡು ದೇವಜನ ಮನೆ. ಅಪ್ಪನ ಹೆಸರ್ ನಂಜಪ್ಪ, ಅವ್ವನ ಹೆಸರ್ ದೇವಮ್ಮ. ಚಾಂಪನ ಹೆಸರ್ ಪೊನ್ನಪ್ಪ. ಚಾಮೆವ್ವನ ಹೆಸರ್ ಮುದ್ದಮ್ಮ. ನಮ್ಮ ಅಪ್ಪ ಅವ್ವಂಗೆ ನಾವು ಐದು ಮಕ್ಕ. ಮೂರು ಗಂಡ್ ಮಕ್ಕ ಎರಡ್ ಹೆಣ್ಣ್ ಮಕ್ಕ. ನಾನ್ ಮಧ್ಯದವಳು. ಆಗ ಮಕ್ಕಳಿಗೆ ಚಳಿಜ್ವರ ಬಂದರೆ ಮಡಿಕೇರಿ ಆಸ್ಪತ್ರೆಗೆ ಬರಕಿತ್ತ್. ಆಗ ಕಾರ್ ಜೀಪು ಯಾವುದು ಇತ್ತ್‌ಲೆ. ಆಗ ಎತ್ತಿನ ಗಾಡಿಗ ಮಾತ್ರ ಇದ್ದದ್. ಕಟ್ಟೆಮಾಡ್‌ಂದ ಮಡಿಕೇರಿಗೆ ಬರಕೊದಾರೆ ಇಪ್ಪತ್ತು ಕಿಲೋಮೀಟರ್ ಆಗ್‌ತ್ತಿತ್ತ್. ಹಾಕತ್ತೂರಲ್ಲಿ ಆಗ ಪಾರ್ವತಿ ಬಸ್ಸ್ ಒಂದು ಹೋಗುತ್ತಿತ್ತ್. ಆಗ ಕಟ್ಟೆಮಾಡ್‌ಂದ ಬಸ್ಸ್‌ಗೆ ಏಳ್ ಮೈಲ್ ಆತಿತ್ತ್. ಆಗ ಮಕ್ಕಳಿಗೆ ಕಾಯಿಲೆ ಬಂದರೆ ನಾಟಿ ಮದ್ದು ಮಾಡಿ ಕುಡ್ಸುದು. ನಂಗೆ ಗ್ಯಾನ ಬಂದದೆ. ನಂಗೆ ಮದ್ದ್ ಕುಡ್ಸಕನ ಚಿಪ್ಪಿ ಸೆಡೆಕಾವ್ ಕಡೆ ಬಾಯಿಗೆ ಹಾಕಿ ನನ್ನ ಕಾಲ್ ಕೈಯಿ ಹಿಡ್‌ಕಂಡ್ ಬಾಯಿಗೆ ಮದ್ದು ಹೊಯ್ತಿದ್ದೊ. ಸೆರೆ ಹತ್ತದಂಗೆ ಮೂಕುನ ಗಟ್ಟಿಯಾಗಿ ಹಿಡಿತ್ತಿದ್ದೊ. ಮಕ್ಕಳಿಗೆ ಜ್ವರ ಬಂದರೆ ಗಜ್ಜ್‌ಗದ ಸೊಪ್ಪುನ ಕೊಡಿತಂದ್ ಒಂದು ಮುಂಡಿ, ಅದಕೆ ಒಳ್ಳೆ ಮೆಣಸಿನ ಕಾಳ್ ಮತ್ತೆ ಒಂದೆರಡ್ ಬೆಳ್ಳುಳ್ಳಿ ಎಸಳ್ ಹಾಕಿ ಸಣ್ಣ ಅರ್ದ್ ಅದರ ಬೆಂಕಿಲಿ ಕೊದ್ದಸಿ ಸ್ವಲ್ಪ ಬಿಸಿ ಇರ್‌ಕನ ಒಂದೊಂದು ಗ್ಲಾಸ್ ಕುಡಿಯಕೆ ಕೊಡುತ್ತಿದ್ದ. ಆಗ ಜ್ವರ ವಾಸಿ ಆಗ್‌ತ್ತಿತ್ತ್. ಸಣ್ಣ ಮಕ್ಕಳಿಗೆ ಕಟ್ರೆ ನಮ್ಮ ಅಪ್ಪ ಒಲೆಯಿಂದ ನೈಸಾದ ಬೂದಿ ತಕಂಡ್ ಗಂಟ್ ಗಂಟ್‌ಗಳಿಗೆ ಬೂದಿ ತಿಕ್ಕಿ ತೊಡೆ ಸೆರೆ ಹಾಕಿ ಸಣ್ಣ ಮಕ್ಕಳ ಆಕಡೆ ಈಕಡೆ ತಿರುಗಿಸಿ ಕಟ್ರೆ ಮುರಿತ್ತಿದ್ದೊ. ನನ್ನನ ಸಹ ಸಣ್ಣದರಲಿ ಹಂಗೆ ಕಟ್ರೆ ಮುರ್ದದ್ ನಂಗೆ ನೆನಪಾದೆ. ಅಳಿಕಟ್ರಿ ಬಳ್ಳಿ ಸೊಪ್ಪುನ ಮದ್ದು ಮಾಡಿ ಕೊಡುತ್ತಿದ್ದ. ವಾಸಿ ಆಗ್‌ತ್ತಿತ್ತ್. ನಮ್ಮನೆಲ್ಲ ಹಂಗೆನೆ ಸಾಕಿದ್. ಇನ್ನೊಂದು ಏನ್ ಹೇಳಿರೆ ಸೊಂಕಿನ ಜ್ವರ ಏನ್ ಆದರ್ ಬಂದರೆ ಅಪ್ಪ ಏನ್ ಮಾಡ್‌ತಿತ್ತ್ ಗೊತ್ತ ಚಿಟ್ಟೆ ಹರಳ್ ಎರಡ್ ಸೊಪ್ಪುಗಳ ತಂದ್ ಐದ್ ಆರ್ ಕಾಳ್ ಅಕ್ಕಿ ಸೊಪ್ಪು ಒಳಗೆ ಹಾಕಿ ಮತ್ತೆ ತುಂಬೆ ಹೂನ ಹಾಕಿ ಜ್ವರ ಬಂದವರ ತಲೆಗೆ

ಮೂರು ಸುತ್ತು ತಂದ್ ಸ್ವಾಮಿ ಅಯ್ಯಪ್ಪ ಜ್ವರ ಬುಡಲಿತ್ತೇಳಿ ಹರಳ್ ಎಲೆನ ಬಾಳೆ ಬಳ್ಳಿಲಿ ಕಟ್ಟಿ ಮನೆ ಸೂರಿನ ಬೆದ್‌ರ್ರ್ ಗಳಕೆ ಕಟ್ಟಿ ಮಡ್‌ಗ್‌ತ್ತಿದ್ದ. ಜ್ವರ ಮಾರನೆ ದಿನಕೆ ವಾಸಿ ಆಗ್‌ತಿತ್ತ್. ನಮ್ಮ ಅಪ್ಪ ಇರ್ಕನ ಕೈಯಿ ಕಾಲ್‌ದ್ ಕೀಲ್ ತಪ್ಪಿರೆ, ಕಾಲ್‌ದ್ ಕೈದ್ ಕೀಲ್ ಕೂಡ ಕೂಡ್‌ತಿತ್ತ್. ಏಳ್ ಎಂಟ್ ವರ್ಷ ಪ್ರಾಯಲಿ ನಾನ್ ಒಂದನೆ ಕ್ಲಾಸ್‌ಲಿ ಇದ್ದೆ. ಒಕ್ಕಲು ಕೆಲಸ ಮಾಡ್ಕನ ನಾನ್ ನೆರೆಮನೆ ಗೂಡೆನು ಸೇರಿಕಂಡ್ ಮೂಡೆತೇಳಿ ಕುರುಬಡೆ ಕಟ್ಟುವೆ. ದೊಡ್ಡದಾಗಿ ಅದರ ಮೇಲೆ ಹತ್ತಿ ನಿಲ್ಲ್‌ಕನ ನಾನ್ ಬಿದ್ದ್ ಕೈಯಿ ಕೀಲ್ ತಪ್ಪಿ ಹೋಗಿತ್ತ್. ಅಪ್ಪನೆ ಕೈಯಿ ಕೀಲ್‌ನ ಕೂಡ್ಸಿತ್ತ್. ಮತ್ತೆ ಯಾಗೊಳ್ ಕೈಯಿ ಎಣ್ಣೆ ತಿಕ್ಕಿ ಬಿಸಿ ನೀರ್ ಒಂದು ತಿಂಗ ಹೊಯ್ದಿ ನನ್ನ ಕೈಯಿ ವಾಸಿ ಆತ್. ಹಂಗಾಗಿ ನಾವು ಆಗ ಆಸ್ಪತ್ರೆ ಕಂಡತ್ಲೆ.

ನಾನ್ ಸಣ್ಣವಳಾಗಿ ಇರ್ಕನ ನಮಿಗೆ ಎಂತ ಆಟ ಗೊತ್ತಾ. ಕಾಯಿ ಚಿಪ್ಪಿ ತಕಂಡ್ ನೆರೆಮನೆ ಮಕ್ಕಳ ಕರ್‌ಕಂಡ್, ಮೂರು ಕಲ್ಲ್ ಮಡಗಿ ಒಲೆ ಮಾಡಿ ಚಿಪ್ಪಿಗೆ ಸ್ವಲ್ಪ ಮಣ್ಣ್ ಹಾಕಿ ನೀರ್ ಹೊಯ್ದ್ ಸಣ್ಣ ಕೋಲ್‌ಲಿ ತಿರಿಗಿಸಿಕಂಡ್ ಅಡಿಗೆ ಕೆಲಸ ಮಾಡ್ದು, ಗೈಪು ಮಾಡ್ದು ಮತ್ತೆ ಪ್ರಂಡ್‌ಗಳಿಗೆ ಸೊಪ್ಪು ಎಲೆಗೆ ಅನ್ನ ಗೈಪುತ್ತೇಳಿ ಇಕ್ಕಿಕೊಡ್ದು. ನಮ್ಮ ಆಟ. ನಮ್ಮ ಆರು ಜನ ಮಕ್ಕಳಿಗೆ ಕೆಮ್ಮು, ಶೀತ, ಜ್ವರ ಬಂದರೂ ಸಹ ನಾವು ಆಸ್ಪತ್ರೆ ಹೋಗಿ ಇಂಜೆಕ್ಷನ್ ಆಗಲಿ ಮದ್ದ್, ಅಗಲಿ ತಕಂಡ್ ಬಾತ್ಲೆ. ನಾಟಿಮದ್ದಲ್ಲಿ ಕೆಮ್ಮು, ಶೀತ, ಜ್ವರ ವಾಸಿ ಆತಿತ್ತ್. ನಮ್ಮ ಅಪ್ಪನಂಗೆ ಗೊತ್ತಿದಂಗೆ ಬೇಕಾದಷ್ಟ್ ಜನರಿಗೆ ಸಹಾಯ ಮಾಡ್‌ತ್ತಿದ್ದ. ಆಗನ ಕಾಲಲಿ ದನಗಳಿಗೆ ದೊಂಡೆ ಕಟ್ಟುವ ಕಾಯಿಲೆ ಬಾರಿ ಬರ್ತಿತ್ತ್. ಅದಕೆ ಅಪ್ಪ ದೊಂಡೆ ಕಟ್ಟ್‌ವ ಕಾಯಿಲೆ ಬರದಂಗೆ ದನಗಳ ಕೊಟ್ಟಿಗೆಗೆ ಮುಟ್ಟಿ ಮಾಡ್‌ತಿದ್ದ. ಎಷ್ಟೆಸ್ಟೊ ದೂರಂದ ಜನ ಬಂದ್ ಕರಕಂಡ್ ಹೋತಿದ್ದೊ. ಯಾರೆಲ್ಲ ಅಪ್ಪನ ಬಾಕೆ ಹೇಳ್ರೆ ಅವರ ಮನೆಗೆಲ್ಲ ಎಷ್ಟು ದೂರ ಆದರು ನಡಕಂಡೆ ಹೋಗುತ್ತಿದ್ದ. ಅಪ್ಪ ಮಾತ್ರ ಯಾರ ಕೈಯಿಂದ ದುಡ್ಡು ತಕಂಡತ್ಲೆ. ಎಷ್ಟೊ ದನಗಳ ಬದಕಿಸೊಳೊ. ದನಗಳಿಗೆ ನನ್ನದೊಂದು ಧರ್ಮ ಇರಲಿಂತ ಅಪ್ಪ ಹೇಳ್‌ತ್ತಿದ್ದ. ದನ ಕರಗಳ ಮೈಲಿ ಗಾಯ ಆಗಿ ಹುಳ ಆಗಲಿ ಹುಳ ಉದರಿಕೆ ಮದ್ದು ಕಟ್ಟಿತ್ತಿದ್ದ.

ನಾನ್ ಸ್ಕೂಲ್‌ಗೆ ಸೇರ್ದ ಬಗ್ಗೆ. ಮರಗೋಡು ಸ್ಕೂಲ್‌ಗೆ ಹಾಜರಾತಿ ಮಾಡ್‌ಕ್ಕನ ನಂಗೆ ಏಳು ವರ್ಷ ಪ್ರಾಯಲಿ, ಈಗನ ಕಾಲದಂಗೆ ಅ ಆ ಇ ಈ ಇತ್ಲೆ ಬರೆಯಕೆ. ಆಗ ನಮ್ಮನ ಸ್ಲೇಟ್‌ನಲ್ಲಿ ಬರ್ಸುದು, ಶ್ರೀಗ. ಆಗನ ಕಾಲಲಿ ಹಿಂಗೆ ಬರೆಯಕು. ಮೊದಲ ಅಕ್ಷರ. ಮರಗೋಡು ಸ್ಕೂಲ್‌ಗೆ ಹೋಕೆ ಬರೆ ಕಾಡ್ ದಾರಿ. ಕೆಸರ್ ಮಣ್ಣ್ ಹೂಣಿಕಂಡ್ ಹೋಕು. ಸ್ಕೂಲ್‌ಗೆ ಹೋಕನ ಮಳೆ

ಬಂದರೆ ನಮಿಗೆ ಕೊಡೆ ಎಂತದ್ ಗೊತ್ತ ಕೂಗಲೆ ಹಾಕಿ ಮಾಡ್ದ ಗೊರಗ್. ಎಪ್ಪತ್ತು ವರ್ಷ ಹಿಂದೆ ಸುತ್ತಮುತ್ತ ಮರಕಾಡ್ ಇತ್ತ್. ಮರಗೋಡು ಆಗ ಕತ್ತಲೆ ಗೂಡು. ನಾವು ಸ್ಕೂಲ್‌ಗೆ ಹೋಗುವ ಕಾಲಲಿ ನಾಲ್ಕ್ ಗ್ರಾಮದ ಮಕ್ಕ ಬಾತಿದ್ದ, ಮರಗೋಡು, ಕಟ್ಟೆಮಾಡು, ಹೊಸ್ಕೇರಿ, ಐಕೋಳ. ಸ್ಕೂಲ್‌ಗೆ ಒಟ್ಟು ನಾನೂರು ಮಕ್ಕ ಇದ್ದೊ. ಒಂಬತ್ತು ಮಾಸ್ಟ್ರಗ ಇದ್ದೊ. ನಾವು ಓದಿದ್ದ ಕ್ಲಾಸ್ ಹೆಂಗೆ ಇತ್ತ್‌ತ ಗೊತ್ತಾ ದನಗಳ ಹಟ್ಟಿಬೇಲಿ. ಆ ಮೇಲೆ ಏಳನೇ ಕ್ಲಾಸ್‌ವರೆಗೆ ಸ್ಕೂಲ್ ಕಟ್ಟಿಸಿಕೊಟ್ಟ. ಸ್ಕೂಲ್ ಗ್ರೌಂಡ್ ಸಣ್ಣದೊಂದು ಬಾಣೆ ಆಗಿತ್ತ್. ಆಗ ನಾಲ್ಕನೆ ಕ್ಲಾಸ್‌ಂದ ಏಳನೇ ಕ್ಲಾಸ್‌ವರೆಗೆ ಒಂದೊಂದು ಪೀರೆಡ್ ಗ್ರೌಂಡ್ ದೊಡ್ಡದ್ ಮಾಡಿಕೆ ಮಣ್ಣು ಹೊರುವ ಕೆಲಸ ಕೊಡುತ್ತಿದ್ದ. ಆಗ ನಮ್ಮ ಕಾಲಲಿ ಓದುವ ಮಕ್ಕಳಿಂದ ಆದ ಸ್ಕೂಲ್ ಗ್ರೌಂಡ್. ನಾನ್ ಮಾತ್ರ ಏಳನೆ ಕ್ಲಾಸ್‌ವರೆಗೆ ಓದಿದ್ದ್ ಮೂರನೆ ಕ್ಲಾಸ್‌ಲಿ ಇರ್ಕನ ನಂಗೆ ಮಾಷ್ಟ್ ಮಾನಿಂಟ್ರ ಕೆಲಸ ಕೊಡುತ್ತಿದ್ದ. ಮಕ್ಕಳ ಎಲ್ಲಾವರನ್ನ ಓದುಸುತ್ತಿದ್ದೆ. ಕ್ಲಾಸ್‌ಲೆ ನನ್ನ ಹ್ಯಾಂಡ್ ರೈಟಿಂಗ್ ಅಕ್ಷರ ನೋಡಿ ಏಳನೆ ಕ್ಲಾಸ್ ಮಕ್ಕಳಿಗೆ ತಕಂಡ್ ಹೋಗಿ ತೋರ್ಸುತ್ತಿದ್ದ. ನಂಗೆ ಇನ್ನು ತುಂಬಾನೆ ಹೆಮ್ಮೆ ಬಾತ್. ಐದನೆ ಕ್ಲಾಸ್‌ಲೆ ಇರ್ಕನ ಹಿಂದಿ ಪಾಠ ಓದಿಸಿಕೆ ಕ್ಲಾಸ್ ಲೀಡರ್ ಮಾಡ್ದ ಮಾಷ್ಟ್. ಓದಿಕೆ ಗೊತ್ತಿಲ್ಲದಿದ್ದರೆ ಮೂಕು ಹಿಡ್ದ್ ಕೆನ್ನೆಗೆ ಹೊಡೆಕೆ ಹೇಳ್ದೊ. ಓದಿಕೆ ಮಕ್ಕಳಿಗೆ ಗೊತ್ತಿಲ್ಲದ್ದಿರೆ ನಾನ್ ಮಕ್ಕಳಿಗೆ ಹೊಡೆಯದಿದ್ದರೆ ನಂಗೆ ಮಾಷ್ಟ್ ಬೆತ್ತದ ಕೋಲಲ್ಲಿ ಹೊಡೆತ್ತಿದ್ದ. ಲೆಕ್ಕ ಪ್ರೆಡಲಿ ಮಾಷ್ಟ್ ಕ್ಲಾಸ್ಸಲಿ ಬಾಯಿಲೆಕ್ಕ ದೊಡ್ಡ ದೊಡ್ಡದ್ ಕೊಡುತ್ತಿದ್ದ. ಅಂತ ಕಷ್ಟದ ಲೆಕ್ಕನ ಒಂದು ಗಳಿಗೆ ಮನ್ಸ್‌ಲಿ ಮಾಡಿ ಎದ್ದ್ ನಿಲ್ಲ್‌ತ್ತಿದ್ದೆ. ಎಲ್ಲಾದರ್ಲು ಪಸ್ಟ್ ಕ್ಲಾಸ್ಲಿ ಬಾತಿದ್ದೆ. ಎಲ್ಲಾದರಲ್ಲು ಉಸಾರಾಗಿ ಇದ್ದೆ. ಪದ್ಯನ ಸೊಬಾನೆ ಹಾಡ್ ಮಾಡಿ ಹಾಡ್‌ತ್ತಿದ್ದೆ. ನನ್ನ ಫ್ರೆಂಡ್‌ಗಳಿಗೆ ಹೇಳಿಕೊಡುತ್ತಿದ್ದೆ. ಸ್ಕೂಲ್‌ಲಿ ಮಧ್ಯಾಹ್ನದ ಊಟ ಆದಂಗೆ ಫ್ರೆಂಡ್‌ಗಳ ಕರಕಂಡ್ ಸ್ವಂತ ಹಾಡ್ ಮಾಡ್ದು ನಂಗೆ ಕುಸಿ. ಬಂದಂಗೆ ಡ್ಯಾನ್ಸ್ ಮಾಡಿ ತೋರಿಸಿ ಕೊಡ್ದು. ನನ್ನ ಫ್ರೆಂಡ್‌ಗೆ ನನ್ನ ಡ್ಯಾನ್ಸ್‌ಗಳ ಕಲ್ತ್‌ಕಂಡ ಮತ್ತೆ ಪದ್ಯನ ಸೊಬಾನೆ ಹೇಳಿಕೆ ಕಲ್ತ್‌ಕಂಡ. ನನ್ನ ಪ್ರೆಂಡ್‌ಗಳಿಗೆ ತುಂಬಾನೆ ಕುಸಿ ಆತ್. ನನ್ನ ಮೇಲೆ ನಂಗೆ ತುಂಬಾ ಓದಿ ಕೆಲಸಕೆ ಹೋಕುತ ತುಂಬಾನೆ ಆಸೆ ಇತ್ತ್. ಅರವತ್ತೈದು ವರ್ಷದ ಹಿಂದೆ ಓದಿಕೆ ಮಡಿಕೇರಿಗೆ ಹೋಕಿತ್ತ್. ಕಟ್ಟೆಮಾಡ್ ನಮ್ಮ ಮನೆಂದ ಹದಿನೈದು ಮೈಲ್ ದೂರ ಆಗ್‌ತಿತ್ತ್ ಹಂಗೆ ಬೇಕಾಗಿ ನನ್ನ ಕ್ಲಾಸ್‌ಗೆ ಕಳ್ಸಿತ್ತೆ.

ಅರ್ವತ್ತನೆ ಇಸವಿಯಲ್ಲಿ ಮದುವೆ ಆದ ನಾವು ಮೊದಲು ಹಾರಂಗಿಲ್ಲಿ ಇದ್ದೊ. ನಾನ್ ಹಾರಂಗಿಲಿ ಇರ್ಕನ ಐದು ವರ್ಷ ಮಹಿಳೆ ಸಮಾಜದ ಪ್ರೆಸಿಡೆಂಟ್

ಆಗಿದ್ದೆ. ಮನೆ ಮನೆ ಚಂದ ಎತ್ತಿ ನಾನ್ ಮತ್ತು ಸೆಕ್ರೆಟ್ರಿ ಅಂಗನವಾಡಿಗೆ ಇದ್ದ ಮಕ್ಕಳಿಗೆ ಆಟದ ಸಾಮಾನ್ ಸಮಾಜಗೆ ಇದ್ದ ಬಟ್ಟೆ ಹೊಲಿಯುವ ಮೆಷಿನ್ ಬೇಕಾದ ಸಾಮಾನ್‌ಗಳ ತರಸಿಕೊಟ್ಟೆ. ಆಗ ಗ್ರಾಮ ಸೇವಕ ಗ್ರಾಮಸೇವಕಿ ಬರ್ತಿದ್ದ. 65 ವರ್ಷದ ಹಿಂದೆ ಹಾರಂಗಿಲ್ಲಿ ಸಮಾಜದ ಹೇಳಿ ಕೋಳಿ ಫಾರಂ ಮಾಡ್ದ್, ಅದರ್ನ ನೋಡಿಕಣಿಕೆ ಒಬ್ಬ ಪಿವನ್ ಇತ್ತ್. ವಾರಕೆ ಎರಡ್ ಸಲ ಐದು ವರ್ಷದ ಒಳಗೆ ಇರುವ ಮಕ್ಕಳಿಗೆ ಗರ್ಭಿಣಿ ಹೆಣ್ಣ್ ಜನಕೆ ಎಸ್ಟ್ ಮಕ್ಕ ಎಸ್ಟ್ ಜನ ಬಂದಳ್ತತೇಳಿ ಲೆಕ್ಕ ಕೊಟ್ಟ್ ಪಿವನಿಗೆ ಕೋಳಿ ಪಾರಂದ ಮೊಟ್ಟೆ ತರಸಿ ಕೊಟ್ಟ್ ಅದರ್ನ ಅಂಗನವಾಡಿ ಟೀಚರ್ ಮೊಟ್ಟೆ ಬೇಯಿಸಿ ಹಾಲ್ ಕಾಸಿ ಕೊಡುತ್ತಿದ್ದ. ಒಂದು ವಾರಕೆ ಒಂದು ಸಲ ಗ್ರಾಮ ಸೇವಕ ಗ್ರಾಮ ಸೇವಕಿ ಮಹಿಳಾ ಸಮಾಜಕೆ ಬರುತ್ತಿದ್ದೊ. ತಿಂಗಳಿಗೆ ಎರಡು ಸಲ ಕಾಟ್ಲಮಿೂನ್ ತಂದ್ ಕೊಡುತ್ತಿದ್ದ. ಬರುವ ಹೆಣ್ಣ್ ಜನ ಅರ್ಧ ಅರ್ಧ ಸೇರ್ ಅಕ್ಕಿ ತಾತಿದ್ದ ಎಲ್ಲವು ಸೇರಿ ಅನ್ನ ಮಾಡಿ ಕಾಟ್ಲಮಿೂನ್ ಸಾರ್ ಮಾಡಿ ಬಂದವು ಎಲ್ಲಾವು ಊಟ ಮಾಡಿ ಹೋಗ್‌ತಿದ್ದೊ. ವರ್ಷಲಿ ಎರಡ್ ಸಲ ಸೋಮವಾರಪೇಟೆಂದ ಆಫೀಸರ್ ಬಾತಿದ್ದ. ಸಭೆ ಸೇರ್ದ ಮೇಲೆ ಆಗ ನಾನ್ ಪ್ರಾರ್ಥನೆ ಮಾಡ್‌ತಿದ್ದೆ. ಮಹಿಳೆ ಸಮಾಜದ ಹೇಳಿ ಐದು ವರ್ಷ ಕೆಲಸ ಮಾಡ್ದೆ. ಹಾರಂಗಿ ಕಟ್ಟೆ ಆದ ಮೇಲೆ ನಮ್ಮ ಆಸ್ತಿ ಎಲ್ಲಾ ಮುಳುಗಿ ಹೋತು. ಎಪ್ಪತ್ತೇಳನೆ ಇಸವಿಯಲ್ಲಿ ಬಿಳಿಗೇರಿ ನಮ್ಮ ಐನ್‌ಮನೆಗೆ ಬಂದ್ 42 ವರ್ಷ ಆತ್. ಮಹಿಳೆ ಸಮಾಜದ ಹೇಳಿ ಬಿಳಿಗೇರಿ ಸ್ಕೂಲ್‌ಲಿ ಆಟೋಟ ವಸ್ತು ಪ್ರದರ್ಶನ ಹಾಡ್‌ಗಾರಿಕೆ ತರತರದ ಆಟಗಳ ಮಾಡ್‌ತ್ತಿದ್ದ. ನಂಗೆ ಮಾತ್ರ ಎಲ್ಲಾದ್ರಲಿ ತುಂಬಾ ಆಸಕ್ತಿ. ಎಲ್ಲಾ ಆಟಗಳಿಗೆ ಸೇರ್‌ತ್ತಿದ್ದೆ. ನಂಗೆ ಮಾತ್ರ ವರ್ಷಂಪ್ರತಿ ಹಾಡ್‌ಗಾರಿಕೆಲಿ ಫಸ್ಟ್ ಪ್ರೈಜ್ ಸಿಕ್ತಾ ಇತ್ತ್. ಮತ್ತೆ ನಾವು ಮಾಡ್ದ ಕೈಗಾರಿಕೆನ ವಸ್ತುಪ್ರದರ್ಶನ ಮಡಗ್‌ತ್ತಿದ್ದ. ಅದಕೆ ಸಹ ನಂಗೆ ಪ್ರೈಜ್ ಸಿಕ್ತಾ ಇತ್ತ್. ಕೊಡಗಿನ ಕಾವೇರಮ್ಮನ ಸ್ವಂತ ಹಾಡ್ ಮಾಡಿ ನಾನ್ ಹಾಡ್ದೆ ಅದಕೆ ವಿಶೇಷ ಬಹುಮಾನತೇಳಿಕೊಟ್ಟೊ. ಸ್ಕೂಲ್ ಟೀಚರ್ ನಾನ್ ಬರ್ದ ಕಾವೇರಮ್ಮನ ಹಾಡ್ ನೋಡಿ ಆಶ್ಚರ್ಯ ಪಟ್ಟತ್. ನಮಿಗೆ ಬರೆಯುಕೆ ಬಾದುಲೆ ನೀವು ಹೆಂಗೆ ಬರ್ದರೀಂತ ಕೇಳ್ದೊ. ಆಕಾಶವಾಣಿಯಿಂದ ರೇಡಿಯೋದಲ್ಲಿ ಅರೆಭಾಷೆ ಹಾಡ್‌ಗಳ್ನ ಕೇಳ್‌ತ್ತಿದ್ದೆ. ನಂಗೆ ಒಂದು ಕುತೂಹಲ ಬಾತ್. ಎರ್‌ಡ್ ಸಾವಿರ ನಾಲ್ಕರಲ್ಲಿ ಆಕಾಶವಾಣಿಯಿಂದ ಬಿಳಿಗೇರಿ ಸ್ಕೂಲ್‌ಗೆ ಒಬ್ಬ ಮಾಸ್ಟ್ರ ಬಂದಿದ್ದ. ಹಾಡ್ ಸೋಬಾನೆ ಜನಪದಗೀತೆ ಹೇಳಿಕೆ. ಆಗ ನಾನ್ ಎರಡ್ ಸೋಬಾನೆ ಕೊಟ್ಟಿದೆ. ರೆಕಾರ್ಡ್ ಮಾಡ್ದ. ರೆಡಿಯಲ್ಲಿ ಇಂತ ದಿನ ಮಧ್ಯಾಹ್ನ ಎರಡ್ ಗಂಟೆಗೆ ಬದ್ದದೆಂತ ರೇಡಿಯೊಲಿ

ಹೇಳುವೆಂತ ಮಾಸ್ಟ್ರ ಹೇಳ್ದ. ಅವು ಹೇಳ್ದ ದಿನ ನಮ್ಮ ಸೋಬಾನೆ ಹಾಡ್ ರೆಡಿಯೋಲಿ ಬರ್‌ತಿತ್ತ್. ನಂಗೆ ತುಂಬಾ ಸಂತೋಷ ಆತ್, ಗುಡ್ಡೆಮನೆ ನಾಣಯ್ಯನ ಹಾಡ್‌ನ ರೆಡಿಯಲಿ ಕೇಳಿ ನಂಗೆ ತುಂಬಾ ಆಸಕ್ತಿ ಹುಟ್ಟಿತ್. ನಂಗೆ ಹೋಗಿ ಆಕಾಶವಾಣಿಯಲ್ಲಿ ಹಾಡಕ್ಕುತ. ನಾಣಯ್ಯನ ಮನೆಗೆ ನಾನ್ ಹೋಗಿ ಅವರ ಜತೆಲಿ ಮಾತಾಡಿ ಆಕಾಶವಾಣಿಗೆ ಅವರ ಜತೆಲಿ ಹೋದೆ. ಆಗ ಮದ್ಯಾಹ್ನದ ಮೂರು ಗಂಟೆಗೆ ಹಾಡ್ ಹೇಳಿಕೆ ಬಂದವರ್ನ ಹಾಡ್ ಹೇಳ್ತಿದ್ದ ಮತ್ತೊಂದು ಸಲ ಬೈತಡ್ಕ ದೇವಮ್ಮನ ಮನೆಗೆ ಹೋಗಿ ಆಗ ಅವಳ ಫ್ರೆಂಡ್ ನಾನ್ ಹಿಂಗೆ ಎರಡ್ ಸಲಹ ಹೋದೆ. ಹಾಡ್ ಜನಪದ ಗೀತೆ ಕಥೆ ಹಿಂದಿನ ಕಾಲದ ಜೀವನ ಸಂಗತಿ. ಹಿಂಗೆ ಎರಡು ತಿಂಗಳಿಗೆ ಒಂದು ಸಲ ಆಕಾಶವಾಣಿಗೆ ಹೋಗಿ ಹಾಡುಗಳನ್ನ ಕೊಡುತ್ತಿದ್ದೆ. ಸಂಗಮ ಚಾನಲಿ ಅಲ್ಲಿ ಹೋಗಿ ಪ್ರಾರ್ಥನೆ ಸೋಬಾನೆ ಜನಪದ ಗೀತೆ, ನಾಟಿಮದ್ದು ಎಲ್ಲಾ ಹೇಳಿಯವಳೆ. ನಂಗೆ ಒಂದಯ ಕ್ಯಾಸಟ್ ಮಾಡಿಕೊಟ್ಟ.

ನಾನ್ ಸ್ಕೂಲ್‌ಗೆ ಹೋಗುವ ಕಾಲಲ್ಲಿ ಮೂರನೆ ಕ್ಲಾಸ್‌ಂದ ಏಳನೆ ಕ್ಲಾಸ್‌ವರೆಗೆ ಓದುದರಲ್ಲಿ ಬರೆಯದರಲ್ಲಿ ಪಸ್ಟ್ ಬಾತಿದ್ದೆ. ಆಟೋಟಗಳಲ್ಲಿ ನೂರು ಮೀಟರ್ ಓಟದಲ್ಲಿ ಫಸ್ಟ್ ಬಾತಿದ್ದೆ. ಮತ್ತೆ ಸೂಜಿ ನೂಲು ಹಾಕುವ ಓಟಲಿ ದೊಡ್ಡ ಬಾಲು ಎಸೆದರಲ್ಲಿ, ಇನ್ನ್ ಬೇರೆ ಬೇರೆ ಆಟಗಳಲ್ಲಿ ಸಹ ಫಸ್ಟ್ ಬಾತ್‌ದೆ. ಇದಕ್ಕೆ ಎಲ್ಲಾದಕ್ಕು ಪ್ರೈಜ್ ಸಿಕ್ತಿತ್ತ್. ಕ್ಲಾಸ್‌ಲಿ ಓದಿ ಪರೀಕ್ಷೆಲಿ ಫಸ್ಟ್ ಕ್ಲಾಸ್ ಮಾರ್ಕ್ಸ್ ತೆಗ್ದರೆ ಪ್ರೈಜ್ ಸಿಕ್ತಿತ್ತ್. ಕ್ಲಾಸ್ ಆಟದ ಪಿರೆಡಲಿ ಚಿಲಕಿ ಆಟ, ಕೊಕ್ಕಟ ರಿಂಗ್ ಆಟ ಇನ್ನ್ ಬೇರೆ ಬೇರೆ ಆಟಗಳ್ನ ಆಡ್ತಿದ್ದೊ. ಈಗ ನಾನ್ ಮೂರು ವರ್ಷಂದ ಅಕಾಡೆಮಿಗೆ ಕಥೆಗಳ ಗಂಧದ ಮರ ಉಪಯೋಗ, ಬೆದ್ರ್‌ದ್ ಉಪಯೋಗ, ಹಂಗೆ ಸುಮಾರ್ ಹಿಂಗಾರ ಬುಕ್ಕ್‌ಗೆ ಬರ್ದ್ ಕೊಟ್ಟೊಳೆ. ಇಷ್ಟೆಲ್ಲ ಬರ್ದದರ ನೋಡಿ ಅಕಾಡೆಮಿ ಫೆಬ್ರವರಿ ತಾರೀಕು ಮೂರರಲ್ಲಿ ಪುತ್ತೂರು ತೆಂಕಿಲ ಭವನಲಿ ನಡ್ದ ಗೌಡ ಸಮಾಜದಲ್ಲಿ ನಂಗೆ ಸನ್ಮಾನ ಮಾಡ್ದ.

✍ **ಕಾಳೆಯಂಡ ತಂಗಮ್ಮ ಅಪ್ಪಚ್ಚ**
ಬಿಳಿಗೇರಿ ಗ್ರಾಮ,
ಮೊ: 9483008653

ಚಿಂತನೆ

# ಹಬ್ಬಗಳ ಕೊಂಡಿ ಮತ್ತೆ ಆಚರಣೆ



"ಉತ್ಸವ ಪ್ರಿಯ ಖಿಲು ಮಾನವ" ಇದ್ ಕವಿ ಕುಲಗುರು ಕಾಳಿದಾಸನ ಉಕ್ತಿ. ಹಂಗೆನೇ ಹಬ್ಬ ಹರಿದಿನ, ತೇರ್, ಜಾತ್ರೆಗಳ್ಲಿ ಕುಸಿಪಡುವ ಮೊನ್‌ಷ ಉತ್ಸವ ಪ್ರಿಯ ಆಗಿತ್ತ್. ನಾವ್ ನೆಲ್ಸಿದ ಈ ಪ್ರಪಂಚ ಧರ್ಮಕ್ಷೇತ್ರ ಹೌದ್. ಹಂಗೆನೇ ಕರ್ಮಕ್ಷೇತ್ರನೂ ಹೌದ್.

ನಮ್ಮ ಸುಖಕ್ಕಾಗಿ ಬೊದ್ಕ್‌ನ ಬದ್‌ಲ್ಸಿಕೆ ನೆಂಟ್ರ್ ನಾಡ್ರ್ ಜೋಸ್ತಿ ನೆರೆ ಕರೆವರ ಒಟ್ಟಿಗೆ ಸೇರಿಕ್ಕಾಗಿ ಕೆಲವ್ ಹಬ್ಬ ಹರಿದಿನಗಳ ಆಚರ್ಸುದು ಹಿರಿಯರ್‌ಂದ ನಡ್ದ್ ಬಂದ ಕ್ರಮ.

ಹಬ್ಬದ ದಿನಗಳ್ಲಿ ಮನೆವ್ಕೆಲ್ಲಾ ಅದರ್ಲಿ ಹೆಣ್ಮಕ್ಕಳಿಗೆ ಕುಸಿನೇ ಕುಸಿ. ಕೋಳಿ ಕೂಂಗುವ ಹೊತ್ತ್‌ಗೆ ಎದ್ದ್ ಮನೆ ಗುಡ್ಸಿ ಉಜ್ಜಿ ರಂಗೋಲಿ ಹಾಕೊವ್, ರಂಗೋಲಿ ಹಾಕಿ ಮಕ್ಕಳ ಮೀಸಿ ಹೊಸ ಬಟ್ಟೆ ಹಾಕ್ಸಿ ತಿಂಬಕೆ ಉಂಬಕೆ ತಯಾರ್ ಮಾಡ್ದು ಬಂದ ಊರ್ ನೆರೆ-ಕರೆ ನೆಂಟ್ರ್‌ಗಳ ಕುಸೀಲಿ ಒಳೆಗೆ ಕರ್ದ್ ಮಾಡ್ದ ಅಡ್ಗೆನ ಇಕ್ಕಿ ಕೊಟ್ಟ್ ಕಷ್ಟ-ಸುಖನ ಮಾತಾಡ್ದು. ಹಿಂಗೆ ಹೆಣ್ಮಕ್ಕ ಅವರ ಕುಸಿನ ತೋರುಸ್ತಿದ್ದೊ. ಇಂತದರೆಲ್ಲ ನೋಡ್‌ಕನ ನಿಜವಾಗಿ "ಗೃಹಿಣಿ ಗೃಹ ಮುಚ್ಯತೇ" ಈ ವಾಕ್ಯ ಸಾರ್ಥಕತೆ ಆದೆ.

ನಮ್ಮ ಹಿರಿಯೊವ್ ಹಬ್ಬಗಳ ಒಂದೊಕೊಂದ್ ಕೊಂಡಿ ಕೂಡ್ಸಿ ಮಕ್ಕಳಿಗೆ ರಾಗಲಿ "ಪಾಡ್ಯ ಯುಗಾದಿ ಪಾಡ್ಯ, ಬಿದಿಗೆ ಸೋಮನ ಬಿದಿಗೆ, ತದಿಗೆ ಅಕ್ಷಯ ತದಿಗೆ, ಚೌತಿ ವಿನಾಯಕ ಚೌತಿ. ಪಂಚಮಿ ನಾಗರ ಪಂಚಮಿ, ಷಷ್ಠಿ ಕುಕ್ಕೆ ಷಷ್ಠಿ, ಸಪ್ತಮಿ ರಥ ಸಪ್ತಮಿ, ಅಷ್ಟಮಿ ಗೋಕುಲಾಷ್ಟಮಿ, ನವಮಿ ಮಹಾನವಮಿ, ದಶಮಿ ವಿಜಯ ದಶಮಿ, ಏಕಾದಶಿ ಪ್ರಥಮೇಕಾದಶಿ, ದ್ವಾದಶಿ ಉತ್ಥಾನ ದ್ವಾದಶಿ, ತ್ರಯೋದಶಿ, ಶನಿತ್ರಯೋದಶಿ, ಚತುರ್ದಶಿ, ಹುಣ್ಣಿಮೆ ಮಾಲಹುಣ್ಣಿಮೆ, ಅಮವಾಸೆ ಮಹಾಲಯ ಅಮವಾಸೆ ಹಿಂಗೆ ಸರ್ಮಾಲೆ ಮಾಡಿ ಹೇಳಿಕೊಡ್ತಿದ್ದೊ. ಹಂಗೆನೇ ಶಾಲೆಲಿ ಹೇಳಿಕೊಟ್ಟದ್ ಈಗೋಳ್ ನೆಂಪಾದೆ.

ಯುಗಾದಿ ಇದ್ ವರ್ಷ ಇಡೀ ಹರ್ಷದಾಯಕ ಆಗಿರ್ಲಿ. ನಂಬಿಕೆಂದ ಯುಗಾದಿನ ಆಚರ್ಸುವೆ. "ಯುಗ" ಹೊಸ ವರ್ಷ "ಆದಿ" ಇದರ ಅರ್ಥ. ಸುರು ಅಥವಾ ಆರಂಭ ಮತ್ತೆ ಬರ್‌ವಂತದ್ ಶಾಸ್ತ್ರೀಯ ದೃಷ್ಟಿಲಿ ಯಮ ದ್ವಿತೀಯಾ ದೇವತೆ ಆದ ಯಮನ ಮತ್ತೆ ಚಿತ್ರಗುಪ್ತನ ಪೂಜೆಗೆ ವಿಶೇಷ ಪ್ರಾಶಸ್ತ್ಯ ಕೊಡುವ ಹಬ್ಬ.

ಲೌಖಿಕ ದೃಷ್ಟಿಲಿ ಬೊದ್ಕುನ ಅಲ್ಪಕಾಲಲಿ ಅಣ್ಣ-ತಂಗೆನ ಸುಮಧುರ ಭಾವ-ಬಾಂಧವ್ಯನ ಕೂಡ್ಸುವ ಹಬ್ಬ. ಅವರ ಬೊದ್ಕುನ ಅರ್ಥಪೂರ್ಣವಾಗಿ ನಡ್ಸಲಿತೇಳ್‌ವಂತದ್ ಭಾವ ಬಿದಿಗೆ ತಿಳ್ಸಿದೆ. ಅಕ್ಷಯ ತದಿಗೆ ಇದ್ ಮಹಾಪುರುಷರ ಉದಾಹರಣೆಗೆ ಕನ್ನಡ ನಾಡ್‌ನ ಪರಶುರಾಮ, ಛತ್ರಪತಿ ಶಿವಾಜಿ, ಬಸವೇಶ್ವರ ಹಿಂಗೆ ಕೆಲವರ ಜನ್ಮ ದಿನ ಆಗಿದ್ದದೆ.

"ಅಕ್ಷಯ ತದಿಗೆ" ಗದ್ದೆ ಹೂಡಿ ಬಿತ್ ಬಿತ್ತಿಕೆ ಒಳ್ಳೆ ಮುಹೂರ್ತ ಆಗಿದ್ದದೆ.

"ಗಣೇಶ ಚತುರ್ಥಿ" ಮೊಣ್ಣ್‌ಲಿ ಗಣಪತಿನ ಮೂರ್ತಿ ಮಾಡಿ ಪೂಜಿಸಿ ನಮ್ಮ ಕಾರ್ಯಕ್ಕೆ ಅಡ್ಡಿ ಆತಂಕ ಬಾರದಾಂಗೆ ಬಿನ್ನೆ ಮಾಡಿ ನೀರ್‌ಲಿ ವಿಸರ್ಜನೆ ಮಾಡುವೆ.

"ನಾಗರ ಪಂಚಮಿ" ಗಣಪತಿನ ಹೊಟ್ಟೆಗೆ ಪಟ್ಟಿ ಆಗಿ ಕುಂಡಲಿ ಶಕ್ತಿ ಪ್ರತೀಕ ಆಗಿ ತ್ರಿಪುರ ಸಂಹಾರ ಕಾಲಲಿ ಮೇರು ಹೆಸ್ರ್‌ನ ಬಿಲ್ಲ್‌ಗೆ ಹೆದೆ ಆಗಿ ಸಮುದ್ರ ಮಥನ ಕಾಲಲಿ ಮಂದಾರ ಪರ್ವತದ ಕಡೆಗೋಲ್‌ಗೆ ಬೊಳ್ಳಿ ಆಗಿ ದುರ್ಯೋಧನನ ಧ್ವಜದ ಚಿಹ್ನೆ ಆಗಿ ನೆಲನ ಹೊತ್ತ ಆದಿಶೇಷನಾಗಿ ಪಾರ್ಶ್ವನಾಥ ತೀರ್ಥಂಕರನ ಶಿರೋಲಾಂಛನ ಆಗಿ ಲಕ್ಷ್ಮಣ ಬಲರಾಮ, ಸುಬ್ರಹ್ಮಣ್ಯ ಸ್ವಾಮಿನ ರೂಪ ಆಗಿರ್ದೇ "ನಾಗ"

ಷಷ್ಠಿ ಸುಬ್ರಹ್ಮಣ್ಯ ಷಷ್ಠಿ ಚಂಪಾಷಷ್ಠಿ ಹಿಂಗೆ ಬೇರೆ ಬೇರೆ ಹೆಸ್ರ್‌ಲಿ ಕರ್ರೊವೆ. ದಕ್ಷ ಬ್ರಹ್ಮನ ಮಗಳ್ ದೇವಸೇನೆನ ಮೊದುವೆ ಆದ ದಿನಂತ ಹೇಳುವೆ.

"ರಥಸಪ್ತಮಿ" ಸೂರ್ಯನ ಜನ್ಮ ದಿನ ಆಗಿದ್ದದೆ. ಸೂರ್ಯ ಸುರೂಗೆ ಸಪ್ತಶ್ವಗಳ ಅಂದರೆ (ಏಳ್ ಕುದುರೆಗಳ) ರಥ ಏರಿ ಉತ್ತರ ಮಾರ್ಗಲಿ ಹೊರ್ಟ ದಿನ ಆಗಿದ್ದದೆ.

"ಶ್ರೀ ಕೃಷ್ಣ ಜನ್ಮಾಷ್ಟಮಿ" ಭಗವಾನ್ ಶ್ರೀ ಕೃಷ್ಣನ ಹುಟ್ಟಿದ ದಿನ ಜೀವನಲಿ ಇರ್‌ವ ಅಂಧಕಾರ ದೂರ ಮಾಡಿ ಬೆಳ್ಕ ಹರ್ಸುವ ಆ ಪರಮಾತ್ಮನ ಲೀಲೆ ಮತ್ತೆ ಲೀಲಾಮೃತನ ಗ್ಯಾನ ಮಾಡ್‌ವಂತದ್ ನೆಂಪುಲಿಸುವಂತದ್. ಧರ್ಮಕ್ಕೆ ಅನ್ಯಾಯ ಮಿತಿ ಮೀರ್‌ಕನ ದುಷ್ಟರಿಗೆ ಶಿಕ್ಷೆ ಶಿಷ್ಟರ ಕಾಪಾಡಿಕ್ಕಾಗಿ ಎಲ್ಲಾ ಜೀವಕೋಟಿಗೂ ಜೀವ ತಳೆವ ಅಭಯ ಕೊಟ್ಟ ನೆಂಪುಲಿ ಶ್ರೀ ಕೃಷ್ಣ ಜನ್ಮಾಷ್ಟಮಿನ ಭಾರತದ ಎಲ್ಲಾ ಕಡೆಗಳ್ಲಿ ಆಚರ್ಸುವ ಹಬ್ಬ ಆಗುಟು.

"ರಾಮ ನವಮಿ" ಚೈತ್ರ ಶುದ್ಧ ನವಮಿಲಿ ಶ್ರೀರಾಮನ ಜನನ ಆಗಿದ್ದದೆ.

ಒಂಬತ್ತ್ ದಿನಗಳವರೆಗೆ ರಾಮೋತ್ಸವ ಆಚರ್ರುವೆ.

"ವಿಜಯ ದಶಮಿ" ಪ್ರಕೃತಿ ಮಾತೆನ ಪೂಜಿಸಿಕೆ ದುಷ್ಟಶಕ್ತಿ ಮೇಲೆ ಶಿಷ್ಟ ಶಕ್ತಿನ ವಿಜಯದ ಸಂಕೇತವಾಗಿ ಆಚರ್ರುವೆ. ದುಷ್ಟರ ಸಂಹಾರ ಮಾಡಿ ವಿಜಯ ಸಾಧಿಸಿದ ದಿನಂತ ನೆಂಪುಗೆ ಬಂದದೆ. ಮತ್ತೆ ಬರುವ ಹಬ್ಬ "ಪ್ರಥಮ ಏಕಾದಶಿ" ಶಯನ ಏಕಾದಶೀ ವೈಷ್ಣವ ಏಕಾದಶಿ, ಹಿಂಗೆ ಬೇರೆ ಬೇರೆ ಹೆಸ್ರ್‌ಂದ ಕರ್ದವೆ.

ನಮ್ಮ ಪುರಾಣಗಳ ಪ್ರಕಾರ ಭಗವಾನ್ ಶ್ರೀಹರಿ ಆಷಾಡ ಶುದ್ಧ ಏಕಾದಶಿಂದ ನಾಕ್ ತಿಂಗಳವರೆಗೆ ಅಖಂಡ ನಿದ್ದೆಲಿ ಇದ್ದದೆ. ಉತ್ಥಾನ ದ್ವಾದಶಿ, ಅಥವಾ (ತುಳಸಿ ವಿವಾಹ) ಲಕ್ಷ್ಮಿ ಎದ್ರುವ ದಿನ ದೀಪಾವಳಿ. ಆದರೆ, ನಾರಾಯಣ ಏಳ್ವ ದಿನ ಉತ್ಥಾನ ದ್ವಾದಶಿ. ಪುರಾಣಗಳ ಪ್ರಕಾರ ಮಹಾವಿಷ್ಣು ಆಷಾಡ ಶುದ್ಧ ಶಯನ ಏಕಾದಶಿಗೆ ಮಲ್ಗಿರೆ ಕಾರ್ತಿಕ ಶುದ್ಧ ದ್ವಾದಶಿಗೆ ಎದ್ದದೆ. ಲಕ್ಷ್ಮಿನಾರಾಯಣರ್ ಜಾಗೃತಾ ವ್ಯವಸ್ಥೆಲಿ ಇದ್ದರೆ ಜಗ ಹೃದಯ ಆನಂದಮಯ ಆಗಿ ಮಂಗಳಕರ ವಾತಾವರಣ ನೆಲ್ಸಿದ್ದದೆ.

ಅದ್ಕಾಗಿ ಕಾರ್ತಿಕ ಶುದ್ಧ ದ್ವಾದಶಿಯಂದ್ "ಪ್ರಬೋಧೋತ್ಸವ"ದ ಮೂಲಕ ನಾರಾಯಣನ ಎದ್ರ್‌ಸಿ ತುಳಸಿನ ಒಟ್ಟಿಗೆ ಮೊದುವೆ ಮಾಡ್ಸುವ ಪದ್ಧತಿ ಬೆಳ್ದ್ ಬಂದುಟು. ಗಂಡ–ಹೆಣ್ಣ್‌ನ ಪ್ರೀತಿ ಹೆಚ್ಚಿಸುವ ಸಂಕೇತ ಆದರ್ಶ ಪುತ್ರ ಸಂಸಾರದ ಕುರುಹಾಗಿ ಆಚರ್ರುವ ವ್ರತನೇ "ಅನಂಗ ತ್ರಯೋದಶಿ" ಹೆಚ್ಚಿ ಕಷ್ಟ ಬರದೆ ಆಚರ್ರುವ ವ್ರತ "ಅನಂತ ಚತುರ್ದಶಿ" "ನೂಲ ಹುಣ್ಣಿಮೆ" ಸೋದರ ಸಂಬಂಧ ಬೆಳ್ಸುವ ಹಬ್ಬ "ರಕ್ಷಾಬಂಧನ" ಜನಿವಾರ ಹಾಕಿದವ್ ಜನಿವಾರ ಬದಲ್ಸುವ ದಿನನೂ ಆಗಿದ್ದದೆ. "ಗುರು ಪೂರ್ಣಿಮೆ" ದೀಪದ ಹಂಗೆ ಯಾಗೋಳ್ ಬೆಳ್ಗಿ ಸಾವಿರ ಸಾವಿರ ದೀಪಗಳ ಬೆಳ್ಗುಸುವ ಸೂರ್ಯನ ಹಂಗೆ ನಾನೂ ಬೆಳ್ಗೊಕು. ಆಸೆಲಿ ಇದ್ದ ವ್ಯಾಸರ ಸಂಕೇತಿಸುವ ಗುರುಗಳ ನೆಂಪು ಮಾಡುವ ದಿನನೇ ಗುರುಪೂರ್ಣಿಮೆ ಅಥವಾ ವ್ಯಾಸ ಪೂರ್ಣಿಮೆ.

"ಮಹಾಲಯ ಅಮಾವಾಸ್ಯೆ" ಹಣ್ಣ್ ಹಂಪಲ್ ಅನ್ನದಾನ ವಸ್ತ್ರ ದಕ್ಷಿಣೆ ದಾನ ಮಾಡ್‌ವ ದಿನ ಆಗಿದ್ದದೆ.

ಹಿಂಗೆ ಹಬ್ಬಗಳ ನಮ್ಮ ಹಿರಿಯವ್ ಕ್ರಮಬದ್ಧಲಿ ಆಚರ್ಸಿಕಂಡ್ ಬಂದಿದ್ದೊ. ಈಗ ಇಂತ ಹಬ್ಬಗ ಯಾವ ತಿಂಗಳ್ಲಿ ಯಾವ ದಿನಲಿ ಬಂದದೆ ಇಂದ್‌ನ ಕೆಲವ್ಕೆ ಗೊತ್ತೇ ಇರ್ದುಲೆ. ಶಾಲೆಗಳ್ಲಿ ಕೂಡ ಹಬ್ಬಗಳ ಹೆಸ್ರ್ ಹೇಳ್ಸುದ್ಲೆ. ಏನಿದ್ದರು ಪುಸ್ತಕದ ಬದನೆ ಕಾಯಿ. ಗೊತ್ತಿದ್ದೊವ್ ಹಬ್ಬಗಳ ಆಚರ್ರುದು ರಜೆ ದಿನಲಿ. ಕೆಲವ್ಕೆ ರಜೆ ದಿನಲಿ ಕೂಡ ಪುರುಸೊತ್ತ್ ಇರ್ದುಲೆ.

ಹಿಂಗಾಗಿ ಹಬ್ಬಗಳ ಆಚರ್ರುದು ಬಾರೀ ಕಡ್ಮೆ ಆವುಟು. ಅದ್ಕಾಗಿ ಇನ್ನ್ ಮುಂದೆನವ್ಕೆ ಹಬ್ಬಗಳ ಬಗ್ಗೆ ಹಂಞ ಆದ್ರ್ ಹೇಳಿಕೊಟ್ಟರೆ ಒಳ್ಳದಿತ್ತ್‌ತ ನನ್ನ ಭಾವನೆ.

✍ **ಉದಯಕುಮಾರಿ ಚೆಂಬು**

(ಕೆಮಿಮಾತ್)

## ನೀರ್ ಬೊದ್ಕ ಗೆ ಬೇರ್....



ಎಸ್.ಡಿ.ಎಂ. ಆಸ್ಪತ್ರೆ ಧಾರವಾಡಲಿ ಜನರಲ್ ಮೆಡಿಸಿನ್‌ನ ಹಿರಿಯ ವೈದ್ಯ ಡಾ. ಜಯಶಂಕರ್ ಅವ್ರೊಟ್ಟಿಗೆ ಹೊರರೋಗಿ ವಿಭಾಗಲಿ ಕುದ್ದಿದ್ದೆ. ಅವ್ರೊ ಬಂದವರ 'ನೀನೆ ನೋಡು ಮರೀ'ತ ಹೇಳಿಬುಟ್ರೊ. ಒಂದ್ ಹೆಂಗ್‌ಸ್ ಬಾತ್.. ಪ್ರಾಯ ಸುಮಾರ್ 45ರ ಒಳಗೆ ಆಗಿರ್ದು. ಹಳ್ಳಿ ಹೆಂಗ್ಸ್, ಲಾಚರಾಗಿ ಹೊಟ್ಟೆ ಹೊಳ್ಕೆ ಹೊಟ್ಟೆನಾಂಗೆ ಬೆನ್ನ್‌ಗೆ ಅಂಟಿ ಹೋಗುಟು. ಎಣ್ಣೆ ಕಾಣದೆ ತಿಂಗ ಆದ ಕೂದಲ್. ಕಣ್ಣ್‌ಗ ಮಾತ್ರ ಪಿಳಿಪಿಳಿ ಹೊಳ್ಪಿದೆ!! ಏನಾದೆತ ಕೇಳ್ದಕ್ಕೆ "ತಲೆನೋವು ಸಾ..." ಅಷ್ಟೇ ಉತ್ತರ. ದೊಡ್ಡ ಡಾಕ್ಟ್ರ ನನ್ನನೇ ನೋಡ್ತೊಳೊ. ಈ ಹೈದ ಏನ್ ಮೊದ್ದ್ ಮಾಡ್ದುತ. ನೀರ್ ಎಷ್ಟ್ ಕುಡ್ದಿಯಾತ ಕೇಳ್ದೆ... ದಿನಕ್ಕೆ 2 ಗ್ಲಾಸ್ ಗಡ!! ಮೋಶನ್ ಸರಿ ಹೋಗದೆ ತಿಂಗಳೇ ಆಗಿರ್ದೊಲ್ಲಾತ ಹೇಳ್ದಕ್ಕೆ ಆ ಹೆಂಗ್ಸ ಹೌದುತ ತಲೆ ಆಡ್ಸಿಕಂಡ್ ನನ್ನ "ಭವಿಷ್ಯ ಹೇಳುವ" ಜೋಯಿಸನ ನೋಡ್ದಾಂಗೆ ನೋಡ್ತ್. ಕಾಲ್‌ಗೆ ಅಡ್ಡ ಬೀಳಿಕೊಂದು ಬಾಕಿ! "ಮೊದ್ಲು ದಿನಕ್ಕೆ ಕಮ್ಮಿಲಿ 3 ಲೀಟರ್ ನೀರ್ ಕುಡಿ. ಬೆಳಗ್ಗೆ ಎದ್ದ ಹಾಂಗೆ ಹೊಟ್ಟೆ ತುಂಬ ಒಂದು ಗ್ಲಾಸ್ ಕುಡಿ. ಹಸುರು ಸೊಪ್ಪು, ತರ್ಕಾರಿ ಜಾಸ್ತಿ ತಿನ್"ತೇಃಳಿ ಕಳ್ಸಿದೆ. ಮೊದ್ದ್, ಮಾತ್ರೆ, ಟಾನಿಕ್‌ತ ದುಡ್ಡ್ ಖರ್ಚಾತ್ಲೆತ ಹೆಂಗುಸೂ ಕುಸಿಲೇ ಹೋತ್. ಈಗ ಸಂಶಯ ನಮ್ಮ ದೊಡ್ಡಾಕ್ಟ್ರಗೆ "ಇದೇನ್ ಮರೀ.. ತಲೆ ನೋವು ಬಂದ್ರೆ ನೀರು ಕಡಿಮೆ ಕುಡಿಯೋದು ಹೆಂಗೆ ಕಾರಣ ಆಗುತ್ತೆ? ಅದೂ ಅಲ್ದೆ ಮೋಶನ್ ಸರಿ ಹೋಗಲ್ಲ ಅಂತ ಹೆಂಗೆ ಕಂಡು ಹುಡುಕ್ದೆ" ಒಟ್ಠಾರೆ ಅವ್ಕೆ ನಾ ಒಂದ್ "ಪ್ರಶ್ನಾರ್ಥಕ ಚಿಹ್ನೆ" ಆದೆ!! "ಸರ್.. ನೀರು ಕಡಿಮೆ ಕುಡಿದ್ರೆ ಶರೀರದಲ್ಲಿ ಒಟ್ಟು

ನೀರಿನಂಶ ಕಡಿಮೆ ಆಗುತ್ತೆ. ರಕ್ತದ ಸಂಚಾರ ಏರುಪೇರುಗೊಂಡಾಗ ಅದುವೇ ತಲೆನೋವು. ಇನ್ನು ಶರೀರದಲ್ಲಿ ನೀರು ಕಡಿಮೆಯಾಯ್ತು ಅಂತ ದೊಡ್ಡ ಕರುಳು ನೀರು ಜಾಸ್ತಿ ಹೀರ್ಕೊಳ್ಳುತ್ತೆ. ಇನ್ನು ಮೋಶನ್ ಹೆಂಗೆ ಸರಿ ಹೋಗುತ್ತೆ!!"
"ಸರಿಯಾಗ್ ಹೇಳ್ದೆ ಮರಿ... ಗೊತ್ತಿದ್ದೂ ನಾವು ಬಳಸ್ಕೊಳ್ಳಲ್ಲ"ತ ಬೆನ್ನ್ ತಟ್ಟಿದೊ.

ದಿನಕ್ಕೆ ಹಕ್ಕಕ್ಕಲೆ 3.5 ಲೀ. ನೀರ್ ಕುಡ್ಯೊಕು. ಏಕೆ ನಮ್ಮ ದೇಹಲಿ ಮುಕ್ಕಾಲ್ ವಾಸಿ ಇರ್ದೇ ನೀರ್. ಬಾಯಿಲಿ ಇರುವ ಜೊಲ್ಲ್‌ಲಿ ನೀರ್, ಕಣ್ಣ್‌ಲಿ ಬಾದೂ ನೀರ್. ರಕ್ತಲಿ ಕೂಡ ನೀರ್. ಇನ್ನ್ ಬೆಗ್‌ರ್ಲಿ, ಮೂತ್ರಲಿ ನೀರೇ ನೀರ್!! ಹಿಂಗಿರ್ಕಾಕ ಅವುಗ ಎಲ್ಲಾ ಸರಿಯಾಗಿ ಕೆಲ್ಸ ಮಾಡೊಕುತಿದ್ದರೆ ನೀರ್ ಬೇಕೇ ಬೇಕು. ಯಾಗ ನೀರ್ ಕಮ್ಮಿ ಆತೋ ಆಗ ಕಾಂಬೊದೇ ಬಗೆಬಗೆ ಸಮಸ್ಯೆಗ. ಉದಾ: ನಿಮ್ಮ ಮನೆಲಿ ಒಂದ್ ಸಣ್ಣ ಕಾರ್ಯಕ್ರಮ ಉಟ್ಟುತ ಇಸಿಕಣಿ. ಮಕ್ಕಳ ಬರ್ತಡೆನೋ ಅಲ್ಲಾ ಅವರವರ ಬರ್ತಡೆನೋ ಹಿಂಗೆ ಎಂತಾರ್. ಸುಮಾರ್ ನೂರ್ ಜನರ ಕರ್ದಿದ್ದರೆ. ಆದರೆ ಆದಿನ ಮೊದ್ವೆಗ ಜಾಸ್ತಿ. ಫೋನ್‌ಲಿ ಕರ್ಯಕಾಕನ ಎಲ್ಲವೂ ಹಂಗೇ ಹೇಳ್ದೊ 'ಒಬ್ಬ ನಂಗೆ 3 ಕಡೆ ಮೊದ್ವೆಗೆ, ಇನ್ನೊಬ್ಬ 5 ಕಡೆಗೆತ' ಕಡೆಗೆ ನೀವು 50 ಜನಕ್ಕೇ ಸಾಕ್‌ತ ಅಷ್ಟೇ ಜನಕ್ಕೆ ಅಡ್ಗೆ ಮಾಡ್ಸಿದರಿ. ಸರಿ... ನೋಡ್ರೆ ಮೂರ್ ಐದ್‌ತ ಮೊದ್ವೆತ ಲೆಕ್ಕ ಒಪ್ಪುಸಿದವು ಎಲ್ಲಾ ಉಂಬಕೆ ಮಾತ್ರ ನಿಮ್ಮಲ್ಲಿಗೇ ಬಂದೊಳೊ..ನೀ ಕರ್ಯಕಾಕನ ಬಾರದೆ ಇರ್ದು ಹೆಂಗೆತ, ಒಟ್ಟೊಟ್ಟಿಗೆ ಹೆಣ್ಣ್‌ನನೂ ಮಕ್ಕಳ್ನೂ ಕಟ್ಟಿಕಂಡ್!! ಎಂತ ಮಾಡ್ದು ಹೆಂಗೆ ಸುದಾರ್ಸುದು? ಇಡ್ಲಿ ಎರ್ಡ್ ಬಳ್ಸುವಲ್ಲಿ ಒಂದೇ, ಗೈಪು ಕೊಡ್ಕಿ ಕೊಡ್ಕಿ ಬಳ್ಸುದು ಅದೂ ಎರಡ್ನೇ ಸರ್ತಿ ಕೇಳಿಕೇ ಇಲ್ಲೆ!! ಸರಿ ಬಂದವು ಉಂಡು ಹೋದೊ.. ಒಟ್ಟಿಗೆ ಬೊಯ್ಕಂಡ್ "ಇಂವ ಎಂತ ಕೊರ್ಸಂಡಿಯಾ...ಕರ್ಯಕೆ ಮಾತ್ರ ಬಿರ್ಸಾಟಿಕೆ.. ಕೈ ಕೊಕ್ಕೆ.. ಕಂಜೂಸು"ತ. ಹಂಗೇ ನಮ್ಮ ಶರೀರಲಿ ಕೂಡ.. ನೀರ್ ಕಮ್ಮಿ ಆದರೆ ಹೊಟ್ಟೆಗೆ ಬೇಜಾರ್.. ಅದೇ ಅಜೀರ್ಣ, ಕರ್ಳ್‌ಗೆ ಬೇಜಾರ್ ಮಲಬದ್ಧತೆ, ಕಿಡ್ನಿಗೆ ಬೇಜಾರ್ ಉರಿಮೂತ್ರ, ತಲೆಗೆ ಬೇಜಾರ್ ತಲೆಬೇನೆ. ಒಟ್ಟಾರೆ ಪೂರ್ತಿ ಶರೀರಕ್ಕೇ ಬೇಜಾರ್. ಅದೇ ಆಯಾಸ, ಕಾಯಿಲೆ. ಹಂಗಾಗಿ ಶರೀರ ಕಾಯಿಲೆ ಇಲ್ಲದೆ ಸರಿ ಇರೊಕುತಿದ್ದರೆ ದಿನಕ್ಕೆ 3.5ಲೀ ನೀರ್ ಕುಡ್ದೇ ಕುಡ್ಯೊಕು.

✍ ಡಾ. ಪುನೀತ್ ರಾಘವೇಂದ್ರ ಕುಂಟುಕಾಡು

**ಪುಸ್ತಕ ವಿಮರ್ಶೆ**

## ಕಾಟಿ ಬೆಟ್ಟದ ಕತೆಗಳು




ನಿವೃತ್ತ ಪ್ರಾಂಶುಪಾಲರಾದ ಶ್ರೀಂಯುತ ಬಿ.ಆರ್. ಜೋಯಪ್ಪರವರ "ಕಾಟಿಬೆಟ್ಟದ ಕತೆಗಳು" ಎಂಬ ಕಥಾ ಸಂಕಲನ ಗ್ರಾಮೀಣ ಪ್ರದೇಶದ ಕೃಷಿಕರ ಜನಜೀವನದ ಸ್ವಾರಸ್ಯಕರವಾದ ಕತೆಗ. ಸ್ವತಃ ಅನುಭವದ ಇಲ್ಲಿರ್ವ ಕಥೆಗ ಎಷ್ಟು ಗಟ್ಟಿಯಾಗಿಟುಂತ ಹೇಳ್ರೆ ಕಾಟಿಬೆಟ್ಟದಷ್ಟು ಗಟ್ಟಿಯಾಗಿಟುಂತ ಯಾವ ಹೆದ್ರಿಕೆ ಇಲ್ಲದೆ ಹೇಳಕ್! ಹಸಿವು, ಬಡತನ, ಕಷ್ಟ, ಅನಾರೋಗ್ಯ, ಸಹಜ ಬಾಲ್ಯ ಇವೆಲ್ಲ ಬರಿವಕ್ಕೆ ವರವಾಗಿ ಬರುವಂತದ್ದ್ ಎಂಬ ನನ್ನನಿಸಿಕೆ ಇಲ್ಲಿ ಸಂಪೂರ್ಣ ನಿಜ ಆಗಿಟು. ಅರೆಭಾಷೆ ಮಾತಾಡುವ ಜನರ ಜೀವನದ ಪರಂಪರೆನೆ ಇಲ್ಲಿ ಸಣ್ಣ ಮಟ್ಟಲಿ ಕಾಣ್ಸಿಕಂಡದೆ. ಲೇಖಕರ ಈ ಪ್ರಾಯಲಿ ನಾವಿವರ ಬಾಲ್ಯದ ಚಿತ್ರಣ ಓದಿಕಾನ ಏನೋ ಭಾವನಾತ್ಮಕ ಖುಷಿ ನಾವುಗೆಸ ಉಂಟಾದೆ. ಬಾಲ್ಯಕ್ಕೆ ಮೆರುಗು ಕೊಡುವಂತ ಈ ಕತೆಗಳ ಓದಿಕಾನ ನಮ್ಮ ಬಾಲ್ಯನು ಕಣ್ಣ ಮುಂದೆ ಬಂದ್ ತಳುಕು ಹಾಕಿಕೊಂಡದೆ. ಅವರ ಬಾಲ್ಯದೊಂದಿಗೆ ನಮ್ಮ ಬಾಲ್ಯದ ವಿಷಯಗಳ ವಿಚಾರ ಮಾಡುವಂಗೆ ಆದೆ. ಇವರ ಬಾಲ್ಯನೆ ಇವರ ಬರವಣಿಗೆನ ಪೊರೆವಂತ ಶಕ್ತಿಂತ ನಮಗನಿಸಿದೆ. ದಕ್ಷಿಣ ಕೊಡಗ್‌ನ ತಿತಿಮತಿ, ಸುಳುಗೋಡು ಪರಿಸರದ ಕಾಟಿಬೆಟ್ಟಂತ ಹೇಳ್ದು ಒಂದು ಕಾಲಲಿ ಕಾಡ್ ಕೋಣಂಗ ಎಗ್ಗಿಲ್ಲದೆ ಮೇಯ್ತಿದ್ದ ದಟ್ಟ ಕಾಡ್. ಹಂಗೆ ಈ ಪ್ರದೇಶಕೆ ಕಾಟಿಬೆಟ್ಟಂತ ಹೆಸರು ಬಂದಿರ್ದುಂತ ನಾವು ಓದಿ ಅಂದಾಜಿಸಕ್. ಅರೆಭಾಷೆ ಕೃಷಿಕರೊಬ್ಬರ್ ಊರೂರು ಸುತ್ತಾಡಿ ಈ ಕಾಟಿಬೆಟ್ಟದ ಪ್ರದೇಶಲಿ ನೆಲೆಕಂಡದ್ ಕಥಾಸಂಕಲನ ಬರ್ದಿರುವ ಲೇಖಕರ ತಂದೆ. ಮಮತೆ ಮನಸ್ಸಿನ ಅನಕ್ಷರಸ್ಥೆ ಅವ್ವ ಇವರ ತಾಯಿ. ಇವರ ಅಂಕೆಯಲ್ಲಿ ಅಕ್ಕನ ಜಾಗ್ರತೆಯಲ್ಲಿ ಬೆಳೆದ ಲೇಖಕರಿಗೆ ಇದುವೆ ಶಕ್ತಿ.

**"ಕಾಟಿಬೆಟ್ಟದ ಕತೆಗಳು"** ಎಂಬ ಶೀರ್ಷಿಕೆನ ಕೇಳಿಕಾನ ಗ್ರಾಮೀಣ ಭಾಗದ ಕತೆಗ ಎಂಬುದಾಗಿ ಭಾವಿಸುದರೊಟ್ಟಿಗೆ, ಬೆಟ್ಟ ಏರುವ ಮಹತ್ವಾಕಾಂಕ್ಷೆ ಹುಟ್ಟುವ ಮನಸ್ಸು ಎಂಬ ಕಲ್ಪನೆಸ ಸುಳಿದಾಡ್ದೆ. ಅಂದರೆ ಜೀವನನುಭವ, ಜೀವನೋತ್ಸಾಹ ಎಂಬ ವಿಚಾರ ಇಲ್ಲಿ ಹೆಚ್ಚು ಅರ್ಥಗರ್ಭಿತ ಆದೆ. ಲೇಖಕರ ಕತೆಗಳ ಓದಿಕಾನ ಅಪಾರ ಜೀವನೋತ್ಸಾಹ ಇರ್ದು ಎದ್ದು ಕಂಡದೆ. ಅನುಭವಗಳಿಗೆ ತಮ್ಮ ಸೃಜನಶೀಲ ಚಿಂತನೆಗಳ ಒರೆಹಚ್ಚಿ ಇಲ್ಲಿ ಕತೆಗಳ ಹೆಣ್ದ್ದೊಳ. ಉಪದೇಶಗ ಇಲ್ಲದ ಇಲ್ಲಿನ ಕತೆಗ ಒಂದು ಸಂದೇಶನ ರವಾನಿಸಿ ಹೋದೆ.

"ನಮ್ಮ ಮನೆಗೆ ಅಪ್ಪನೆ ಇಂಜಿನಿಯರ್" ಕತೆಲಿ ಸ್ವತಃ ಅವರೆ ಅಂದರೆ, ಲೇಖಕರ ತಂದೆ ಬಿದಿರಿನ ಮನೆ ಕಟ್ಟುವ ವಿಷಯ ತಿಳ್ಸಿದ್ ನಮಗೆ ಓದಿಕಾನ ಆಶ್ಚರ್ಯನು, ರೋಮಾಂಚನನು ಆದೆ. ಈಗ್‌ನ ಕಾಲಲಿ ನಾವೇ ಸ್ವಂತ ಮನೆಗಳ ಕಟ್ಟಿಕಣಕ್ ಎಂಬ ವಿಚಾರನ ಊಹಿಸಿಕು ಆದ್ಲೆ. ಆದರೆ ಆಗ ಈಗಿನಂಗೆ ಅಲ್ಲ. ಅವ್ಕೆವ್ಕೆ ಬೇಕಾದ ಮನೆಗಳ ಕಾಡ್‌ಲಿ ಸಿಗ್ವ ಬಿದ್ರ್ ಉಪಯೋಗಿಸಿಕಂಡ್ ಕಟ್ಟಿಕಣ್ತಿದ್ದೊ. ನೆಲಕ್ಕೆ ಸೆಗಣಿ, ಗೋಡೆಗೆ ಮಣ್ಣ್ ಇತ್ಯಾದಿ ಉಪಯೋಗಿಸಿಕಣ್ತಿದ್ದೊ. ಈ ಕತೆಲಿ ಬರ್ವ ಸಾಲ್ "ಅಪ್ಪ ಕಾಟಿಬೆಟ್ಟದ ಕಾಡ್‌ಲಿ ಮತ್ತೊಂದು ಮನೆ ಕಟ್ಟಿದೆ. ಅದುಸ ಕಂಬದ ಮನೆ, ಹುಲ್ಲ್‌ನ ಮಾಡ್, ನೆರಿಕೆನ ಗೋಡೆ, ಬಿದ್ರ್‌ನ ಎರ್ಡ್ ಬಾಗ್ಲ್, ಕಿಟಕಿ ಇಲ್ಲೆ. ನೆರಿಕೆನ ಒಟ್ಟೆನೆ ಕಿಟಕಿ! ನಿಜವಾಗಿಸ ನಾವುಗೆ ದಟ್ಟ ಅನುಭವ ನೀಡಿದ ಪುಟ್ಟ ಮನೆ ಇದ್. ಅಲ್ಲಿ ಗೋಲಿ, ಚೆಂಡ್, ಚಿಲ್ಕಿ, ಕಲ್ಲಾಟ, ಓದು ಬಾಲ್ಯದ ಬದುಕಿಗೆ ಬೊಟ್ಟನಿಟ್ಟು ಮುದ್ದಾಡ್ದ ಮನೆ" ಈ ಸಾಲ್‌ಗಳ ಓದಿಕಾನ ಮೈ ರೋಮಾಂಚನಗೊಂಡದೆ. ಇದ್ 1965 ಇಸವಿಯ ವಿಚಾರ. ಆಗೆಲ್ಲಾ ಕೃಷಿಕರಿಗೆ ಗಳಿಕೆ ಇಲ್ಲೆ, ಖರ್ಚುನು ಇಲ್ಲೆ, ಬೆಳ್ಸಿದೆಲ್ಲಿ ತಿಂಬಕೆ ಸರಿ ಆಗ್ತಿತ್. ಎಂತಹ ಜೀವನ! ಅಪರೂಪಕ್ಕೊಮ್ಮೆ ಗಳಿಸಿದ ದುಡ್ಡ್‌ನ ತುಂಬಾ ಜತನದಿಂದ ಖರ್ಚು ಮಾಡ್ತಿದ್ದ ಕಾಲ.

ಲೇಖಕರ ಬಾಲ್ಯಲಿ ಶಾಲೆಗೆ ಹೋಗಿ ಕಲ್ತದ್ದರಂದ ಹೆಚ್ಚಾಗಿ, ಪ್ರಕೃತಿ ಎಂಬ ಪಾಠಶಾಲೆ ಕಲ್ಸಿದ ವಿಷಯವೇ ಅವ್ಕೆ ಹೆಚ್ಚು ಎಂಬುದುದು ಇಲ್ಲಿ ಕಥೆಗಳ ಓದಿಕಾನ ನಾವ್ಗೆ ಮನದಟ್ಟಾದೆ. **ಕರೆದುಕೋ ಬಾ ಯಮರಾಯ** ಕತೆಲಿ ಶಾಲೆಗೆ ಸದಾರಮೆ ನಾಟಕ ತಂಡ ಬಾಕನ ರಾತ್ರೆನೆ ಶಾಲೆಗೆ ಹೋಗಿ ಬಂದ ಅನುಭವ, ಸುಡುಕಣಿ ದಾಟಿಕಾನ ಆದ ಹೆದ್ರಿಕೆ, ಅವ್ವನ ಧೈರ್ಯ ಇವೆಲ್ಲ ಲೇಖಕರ ಮನಸ್ಸಿನ ಮೇಲೆ ಬೀರ್ದ ಗಾಢ ಪರಿಣಾಮವೇ ಈ ಕತೆನ ಸೃಷ್ಟಿಗೆ ನಾಂದಿಯಾಗಿಟು. ಇನ್ನೊಂದು ಅದ್ಭುತ ಕತೆ **ಕಾಫಿ, ಕಿತ್ತಳೆ ಹೂವು ಮತ್ತು ಹೆಜ್ಜೇನು** ಇದರ್ಲಿ ಶಾಲೆಗೆ ಹೋಗಿ ಬರ್ವ ದಾರಿಲಿ ಇರ್ತಿದ್ದ ಕಿತ್ತಳೆನ ಭಾರಕ್ಕೆ

ಬಾಗಿ ನೆಲ ಮುಟ್ಟುವ ಕಿತ್ತಳೆ ಮರದ ಕೊಂಬೆಗಳ ವೈಭವ. ಕಾಫಿ ಹೂ ಬಿಡುವ ಸಮಯಲಿ ಕಾಫಿ ಮರದ ಸೌಂದರ್ಯ ಮತ್ತೆ ಪರಿಮಳ, ಶಾಲೆನ ದಾರಿಲಿ ಸಿಗ್ವ ಜೇನುಗೂಡುಗಳ ನೋಡಿಕಂಡ್ ಸಾಗ್ವ ದಾರಿ ಇಂತ ಅಭೂತಪೂರ್ವ ಅನುಭವಗಳ ಪಡೆದ ಲೇಖಕರ್ ಧನ್ಯರ್ ಎಂಬ ಭಾವನೆ ಮೂಡಿಬುಟ್ಟದೆ. **ಆಸೆ ಹುಟ್ಟಿಸಿದ ಮೀಸೆ ಮೀನು** ಕಥೆಲಿ ಶಾಲೆ ದಾರಿಲಿ ಮಳೆಗಾಲಲಿ ಮೀನು ಹಿಡಿದರ ನೋಡಿ ಅವ್ಕ ಆಸೆಯಾಗಿ, ಅವ್ವನ ಒತ್ತಾಯ ಮಾಡಿ ಕರ್ಕಂಡ್ ಹೋಗಿ ಮೀನ್ ಹಿಡ್ದ ನೆಂಪು ಇಲ್ಲಿ ಕತೆಯಾಗಿಟು. ಅಟ್ಟೆ ಅಂತೇಳ್ವ ಜಲಚರ ಹುಟ್ಸಿದ ಭಯ, ಎಸಂಡ್ ಬೇಟೆ ಎಲ್ಲದರಸ ಇವರ ಕತೆಗಳ್ಲಿ ಓದಿಕಾನ ಇವರ ಬಾಲ್ಯ ಹಿಂಗೆ ಇದ್ದು ಬುಡಕಾಯ್ತ್ ಎಂಬಷ್ಟ್ ಹತ್ರ ಆದೆ. ಹೆಚ್ಚಿನೆಲ್ಲ ಅನುಭವ ಕಥನಗ ಬಾಲ್ಯದ ಶಾಲೆನ ದಾರಿನೆ ಆಗಿಟು. ಕಾಟಿಬೆಟ್ಟದ ಬುಡಲಿ ಎಲ್ಲಿ ಮನೆ ಮಾಡ್ರು, ಶಾಲೆ ಅದೆಷ್ಟೋ ದೂರ ಇದ್ದರುಸ ಶಾಲೆಗೆ ಹೋಗುದರ ತಪ್ಪಿಸಿಕೆ ಬುಡದ ಲೇಖಕರ ಹೆತ್ತವರ ನಾವಿಲ್ಲಿ ಮನಸ್ಸು ತುಂಬಿ ಮೆಚ್ಚಿಕಣಕು. ಶಾಲೆಗೆ ಹೋಗದಿರ್ತಿದ್ದರೆ ಇಂತ ಕತೆಗಳೆ ಹುಟ್ಟಿಕಣ್ತಿತ್ಲೆ. ಯಾಕೆಂತ ಹೇಳ್ರೆ ಅಂದ್‌ನ ಕಾಲನೆ ಹಂಗಿತ್. ವಿದ್ಯಾಭ್ಯಾಸದ ಮಹತ್ವ ಜನಗಳ್ಲಿ ಕಡಿಮೆ ಇತ್.

ಇಲ್ಲಿನ ಕತೆಗಳ ಆಕರ್ಷಣೆ ಹೆಂಗುಟ್ಟುಂತ ಹೇಳ್ರೆ ಸುರು ಮಾಡ್ರೆ ಮುಗಿವರ್ಗೆ ನಮ್ಮ ಹಿಡಿದಿಡ್ದದೆ. ಕತೆಗಳ್ಲಿ ಅದರದೇ ಆದ ಸತ್ವ ಉಟ್ಟು. **ಪಾತಿ ನೆತ್ತಿ ಜಾರು ಚಡ್ಡಿ** ಎಂಬ ಕತೆ ಮುಡಿ ಕೊಟ್ಟು ಶಾಲೆಲಿ ಅನುಭವಿಸಿದ ಪರಿಪಾಟ್ಲು, ಅದರೊಟ್ಟಿಗೆ ಕ್ಷೌರದ ವಿಷಯ ಭಾರಿ ಲಾಯ್ಕಲಿ ಮೂಡಿಬಂದುಟು. ಬಡತನಲಿ ಇರಿಕಾನ ಹಬ್ಬಂತ ಹೇಳ್ರೆ, ಕೈಲಿ ದುಡ್ಡಿದ್ದರೆ ಹೊಸಬಟ್ಟೆ, ಹಬ್ಬದೂಟ ಇಲ್ಲರೆ ಏನೂ ಇಲ್ಲೆ ಎಂಬ ವಿಚಾರ ಇಡೀ ಕತೆನ ಒಳದನಿ.

ಲೇಖಕರ್ ತಾನ್ ಬಾಲ್ಯಲಿ ನಡೆದಾಡ್ದ ಕಾಡ್ನ ನೆಲನ, ಧನ್ಯತಾ ಭಾವಲಿ ನೆಂಪು ಮಾಡಿಕಂಬದುಂತ ಹೇಳ್ರೆ ಹಿಂಗೆ ಎಂಬ ಭಾವನೆ ಮೂಡ್ಸುವ ಕತೆಗ **ಬೀಜದ ಹೋರಿ ರಾಜ ಆದರೇನ್, ಇಲ್ಲಿ ಬಿಟ್ಟರೆ ಇಲ್ಲಿ ತಿರ್ಗುವ ಬುಗುರಿ, ಸತ್ತ ಆನೆಯ ಮೇಲೆ, ಪೀರುವಿನ ಗಾಡಿ,** ಇತ್ಯಾದಿ ಕತೆಗ ಉಟ್ಟು. ಇದ್ ಕನ್ನಡಲಿ ಆದ ಕಥಾ ಸಂಕಲನ ಆದರುಸ ಅದೆಷ್ಟೋ ಶಬ್ದಗ, ಕತೆಲಿ ಬಂದ ಪದ್ದತಿಗ, ಸಂಪೂರ್ಣ ಅರೆಭಾಷೆ ಜನಜೀವನಕ್ಕೆ ಸಂಬಂಧಿಸಿದ್ ಆಗಿಟು. ತನ್ನ ಮಣ್ಣ್‌ನ ಸ್ಪರ್ಶನ ಭಾವನೆಗಳ್ಲಿ ಸ್ಫುರಿಸಿ ನಾವುಗೀಗ ಓದ್ವ ಸುಖನ ನೀಡ್ದ ಇಲ್ಲಿನ ಕಥೆಗ ಖಂಡಿತವಾಗಿಸ ಸಾರ್ಥಕತೆಂದ ಬೀಗಿದೆ. ಲೇಖಕರೊಬ್ಬರ್ ತಾನ್ ಹುಟ್ಟಿ ಬೆಳ್ದ ನೆಲದ ಋಣ ತೀರ್ಸುದುಂತ ಹೇಳ್ರೆ ಹಿಂಗೆ ಎಂಬಂಗೆ ಕಥೆಗ ಎದೆಯೊಳಗೆ ಇಳ್ದು ಬುಟ್ಟೊಳ.

✍ ಸಂಗೀತ ರವಿರಾಜ್

# ಖಾರ ರೊಟ್ಟಿ

<u>ಬೇಕಾಗುವ ಸಾಮಾನ್ :</u>

ಮೈದಾ ಹಿಟ್ಟ್ – 2 ಕಪ್
ತೊಗರಿಬೇಳೆ – 1 ಕಪ್,
ಮೆಣಸಿನ ಹೊಡಿ – 2 ಚಮಚ
ಉಪ್ಪು – ಸ್ವಲ್ಪ
ಇಂಗು – ಸ್ವಲ್ಪ
ಹೊರಿಯಕೆ ಎಣ್ಣೆ – 2 ಕಪ್

<u>ಮಾಡ್ವ ಕ್ರಮ :–</u>

ತೊಗರಿ ಬೇಳೆನ ಒಂದು ಗಂಟೆ ನೆನೆಯಕೆ ಹಾಕೋಕು. ಮತ್ತೆ ಲಾಯಿಕ ತೊಳ್ದ್ ಮೆಣಸಿನ ಹೊಡಿ, ಉಪ್ಪು, ಇಂಗು ಹಾಕಿ ಗಟ್ಟಿ ಆಗಿ ಸಣ್ಣ ಕಡ್ದ್ ಸಣ್ಣ ಉಂಡೆನ ಮಾಡಿಕೊಣೊಕು. ಮೈದಾ ಹಿಟ್ಟ್‌ನ ಪೂರಿ ಹಿಟ್ಟಿನಂಗೆ ಕಲಸಿ, ಉಂಡೆ ಮಾಡಿ ಸ್ವಲ್ಪ ಚಪ್ಪಟೆ ಮಾಡಿ, ಅದರ ಒಳಗೆ ತೊಗರಿಬೇಳೆದ್ ಚೂರ್ಣದ ಉಂಡೆನ ಇಸಿಬುಟ್ಟು ಮುಚ್ಚಿ ಪೂರಿಯಂಗೆ ಲಟ್ಟಿಸಿ ಎಣ್ಣೆಲಿ ಪೂರಿಯಂಗೆ ಕಾಸೊಕು.

✍ಎನ್.ಎಸ್. ಕವಿತ



# ಕೃಷಿ ಸಂಬಂಧಿತ ಗಾದೆಗ

1. ಅಂಗೈ ಹಂಗೆ ಹೊಲ ಮಾಡ್ರೆ ಮುಂಗೈ ತುಂಬಾ ತುಪ್ಪ.
2. ಅಗಲ ಆಗಿ ಮಾಡ್ವ ಬದ್ಲ್ ಆಳ ಆಗಿ ಮಾಡ್.
3. ಅನ್ನ ಹಾಕಿದ ಮನೆ ಹಾಳಾದುಲೆ, ಗೊಬ್ಬರ ಹಾಕಿದ ಹೊಲ ಹಾಳಾದುಲೆ.
4. ಆರಂಭ ವರುಷ, ವ್ಯಾಪಾರ ನಿಮಿಷ.
5. ಆಶ್ಲೇಷ ಮಳೆ, ಆಶೆಭಾಷೆ ಇಲ್ಲದ ಮಳೆ.
6. ಉದ್ದು ಮದ್ದಲ್ಲ.
7. ಎತ್ತ್ ಮಾರಿದವಂಗೆ ಹಗ್ಗದ ಚಿಂತೆಯಾಕೆ?
8. ಎರೆ ಹೊಲ ಲೇಸು, ಕರೆ ಹೆಂಡ್ರು ಲೇಸು.
9. ಒಂದು ಕುರುವಾಯಿ ಕೊಂದರೆ ಒಂಬತ್ತು ತೆಂಗು ನೆಟ್ಟ ಫಲ.
10. ಒಡ್ಡು ಇಲ್ಲದ ಹೊಲ ಗೊಡ್ಡೆಮ್ಮೆ ಇದ್ದಂಗೆ.
11. ಕಾಡ್‌ಕೆಸಕ್ಕೆ ಮಣ್ಣ್ ಕೂಡ್ಸಿದಂಗೆ.
12. ಕೈ ಕೆಸರಾದರೆ ಬಾಯಿ ಮೊಸರು.
13. ಕೊಟ್ಟ ಸಾಲ ಕೇಳದೆ ಹೋತು, ಮಾಡ್ದ ಹೊಲ ನೋಡದೆ ಹೋತು.
14. ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯೇ ಮೇಲು.
15. ಜೇನ್ ತೆಗ್ದಂವ ಕೈ ನೆಕ್ಕದಿರ್ಕಿಲ್ಲೆ.
16. ತೆಂಗು ತೇಲಕ್ಕೆ ನೆಡು, ಅಡಿಕೆ ಆಳಕ್ಕೆ ನೆಡು.
17. ತೋಟ ಶೃಂಗಾರ, ಒಳಗೆ ಗೋಳಿ ಸೊಪ್ಪು.
18. ನಾಟಿ ಮಾಡ್ದ ಹೊಲಚೆಂದ, ಮೇಟಿ ನೆಟ್ಟ ಕಳ ಚೆಂದ.
19. ಬಡವಂಗೆ ಬಾಳೆ, ಸೊಕ್ಕಿದವಂಗೆ ಶುಂಠಿ.
20. ಬಡತನ ಬಾಕನ ಬಾಳೆನೆಡ್.
21. ಬಾಳೆಗೊಂದು ಗೊನೆ, ಬಾಳೋಳಿಗೊಂದು ಮನೆ.
22. ಬಾಳೆಗೆ ಕಡಗು (ಗುಣಿ) ಸೂಳೆಗೆ ಬೆಡಗು.
23. ಬೆಳೆ ಬಾಕನ ಚೋರೆ ಹಕ್ಕಿಗೂ ಎರ್ಡ್ ಹೆಂಡ್ರ್.
24. ಬೆಳೆ ಕೆಲ್ಸಲಿ ಕಿಚ್ಚಿಗೆ ಬಿದ್ದ ಮಕ್ಕಳ ಎಳೆಯಕೂ ಪುರುಸೊತ್ತಿಲ್ಲೆ.
25. ಬೇಸಾಯಗಾರ ಬೇಗ ಸಾಯ.
26. ಮಕ್ಕಳ ಹೊಡ್ದ್ ಸಾಂಕ್, ನುಗ್ಗೆ ಮುರ್ದ್ ಸಾಂಕ್.
27. ಮೇಟಿ ಬಲ ಇದ್ದರೆ ಕೋಟಿ ಗೆಲ್ಲಕ್.
28. ಮಾಟ ಮಾಡ್ದವ್ರ ಮನೆ ಹಾಳ್, ತೋಟ ಮಾಡದವ್ರ ಹೊಲ ಹಾಳ್.
29. ರಟ್ಟೆ ಗಟ್ಟಿ ಇದ್ರೆ ರೊಟ್ಟಿಗೆ ತೊಂದ್ರೆ ಇಲ್ಲೆ.
30. ಲಾಭ ಇಲ್ಲದೆ ಶೆಟ್ಟಿ ಹೊಳೆ ಕೆಳ್ಗೆ ಹೋಕಿಲೆ.
31. ಸಾಧಿಸಿರೆ ಸಬಳ (ಈಟಿ) ನುಂಗಕ್.

32. ಹಚ್ಚಗಿರುವ ಕಡೆ ಮೇವು, ಬೆಚ್ಚಗಿರುವ ಕಡೆ ನಿದ್ದೆ.
33. ಹನಿ ಕೂಡಿ ಹಳ್ಳ, ತೆನೆ ಕೂಡಿ ಬಳ್ಳ (ನಾಲ್ಕು ಸೇರು ಅಳತೆ)
34. ಹಸಿವಿಲ್ಲದವಂಗೆ ರಸ ಬಾಳೆ ರುಚಿ ಆದೋ?
35. ಹಿತ್ಲುಗಿಡ ಮದ್ದಲ್ಲ
36. ಹುಬ್ಬೇ ಮಳೆ ಅಬ್ಬೇ ಹಾಲ್.
37. ಹೂಡದೆ ಗದ್ದೆ ಹಾಳಾತ್, ನೋಡದೆ ಮನೆ ಹಾಳಾತ್.
38. ಹೂಡುದು ಬುಟ್ಟ್ ಎಸ್‌ಂಡ್ ಹಿಡ್ದಂಗೆ.
39. ಹೂವುನೊಟ್ಟಿಗೆ ಬಾಳೆ ನಾರ್ ಸ್ವರ್ಗಕ್ಕೆ ಹೋದಂಗೆ.
40. ಹೆಂಡ ಕುಡ್ದವನ ಹೆಮ್ಮೆ ನೋಡು, ಭಂಗಿ ಕುಡ್ದವನ ಭಂಗ ನೋಡು.
41. ಹೆಡ್ಡನ ಆರಂಭ ಗೊಬ್ಬರಲಿ.
42. ಹೊನಗನೆ ಸೊಪ್ಪು (ಒಂದು ಬಗೆಯ ಹುಳಿಸೊಪ್ಪು) ಹೊಸ ಕಣ್ಣ್ ಕೊಟ್ಟತ್.

✍ಸಂಗ್ರಹ : **ಕುಲ್ಲಚನ ಕಾರ್ಯಪ್ಪ**

## ಹಿಂಗಾರಕೆ ನೀವೂ ಬರೆನಿ

ಹಿಂಗಾರ ತ್ರೈಮಾಸಿಕ ಪತ್ರಿಕೆಗೆ ನೀವು ಕತೆ, ಪದ್ಯ, ಲೇಖನ, ಅಡುಗೆ, ರಂಗೋಲಿ, ಅನುಭವ, ಗಾದೆ, ಪದಕೋಶ ಇಂತದರೆಲ್ಲ ಬರ್ದ್ ಕಳ್ಸಿ. ಪ್ರಕಟಣೆಗೆ ಆಯ್ಕೆ ಆದ ಸಾಹಿತ್ಯನ ಪ್ರಕಟಿಸಿವೆ. ಹೊಸದಾಗಿ ಬರೆವು ಬರ್ದರ ಒಮ್ಮೆ, ಇಮ್ಮೆ, ಮತ್ತೊಮ್ಮೆ ಓದಿ ತಿದ್ದಿ ಬರೆನಿ. ಮನ್ಸಿಗೆ 'ಈಗ ಸರಿ ಆತ್'ತ ಆದ ಮೇಲೆ ಫುಲ್‌ಸ್ಕೇಪ್ ಹಾಳೆಲಿ 4 ಪುಟಕ್ಕೆ ಮೀರದಂಗೆ ಒಂದೇ ಕಡೆ ಬರೆನಿ. ಮಾರ್ಜಿನ್ ಬುಟ್ಟ್ ಬರೆನಿ. ಬರವಣಿಗೆ ನಿಮ್ಮ ಸೊಂತದ್ದಾಗಿರ್‌ಲಿ. ಅದೇ ಹಾಳೆಲಿ ನಿಮ್ಮ ಪೂರ್ತಿ ಹೆಸ್ರ್, ವಿಳಾಸ, ದೂರವಾಣಿ ಸಂಖ್ಯೆನ ಕಡ್ಡಾಯ ಆಗಿ ಬರೆನಿ.


ಹಿಂಗಾರದ ವಿಳಾಸ : **ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ – 571 201
ಕೊಡಗು ಜಿಲ್ಲೆ
ಇ–ಮೇಲ್ : arebaseacademy@gamil.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 223055

## ಗಾದೆ ಗಮ್ಮತ್ತ್ (ಹಿಂದೆನ ಸಂಚಿಕೆಂದ)

403. ಕುದ್ದ್ ತಿಂಬವಂಗೆ ಕುಡ್ಕೆ ಹೊನ್ನು ಸಾಲ್ದ್.
404. ಹಿತ್ತ್‌ಲ್‌ನ ದೈ ಮೊದ್ದಲ್ಲ
405. ನಾಳೆ ಹುಟ್ಟುವ ಕೂಸಿಗೆ ಇಂದೇ ಅಂಗಿ ಹೊಲ್ಸಿತ್.
406. ಮೊಜ್ಜಿಗೆಗೆ ಹೋದಂವ ಎಮ್ಮೆ ಕ್ರಯ ಕೇಳ್ದ್.
407. ಯೇಮೆ ಮೊಲ ಪಂಥ ಕಟ್ಟಿದಂಗೆ.
408. ನಿಲ್ಲಿಕೆ ಜಾಗ ಕೊಟ್ಟದಕ್ಕೆ ಇಡಿ ಊರ್ಗೇ ಬೇಲಿ ಹಾಕಿತ್.
409. ಆಡ್ ಹೊದ ಕಾಡ್ ಹಾಳ್, ಕೋಮಟಿ ಹೋದ ಊರು ಹಾಳ್.
410. ಬೆರ್ಲ್ ತೋರ್ಸಿದಕೆ ಕೈನೇ ನುಂಗಿತ್.
411. ಉಂಬ ಗಂಜಿಗೆ ವಿಷ ಹಾಕಂವ.
412. ಕುದ್ಕನ ಮಾತ್‌ಕೇಳಿ ಸಿಂಹ ಬಾವಿಗೆ ಬೀತ್.
413. ಸಿಂಹನ ಕಂಡ ಸಾರಂಗದಂಗೆ.
414. ಓಡಿತ್ ಹುಲ್ಲು ಹುಟ್ಟದಂಗೆ.
415. ಮಾಡುದುಣ್ಣೊ ಮಹಾರಾಯ.
416. ಯೇಮೆ ಮೊಟ್ಟೆ ಇರ್ಸಿದಂಗೆ.
417. ಅಡಿಗೆ ಬಿದ್ದರೂ ಮೀಸೆ ಮೇಲೆ.
418. ಕವಡೆ ಕಾಸ್ ಕಿಮ್ಮತ್ತಿಲ್ಲೆ.
419. ನುಂಗಿ ನೀರ್ ಕುಡ್ದಂಗೆ.
420. ಮಳ್ಳಿನ ನೋಟ ತಿಳ್ದಂವ ಇಲ್ಲೆ.
421. ಅಣ್ಣನ ಪೆಟ್ಟ್ ಅರೆ, ಆದರೆ ನನ್ನ ಪೆಟ್ಟ್ ನಿಜಂತೇಳ್ತ್.
422. ಬಡವನ ಮಾತ್ ಕೆನ್ನೆಗೆ ಮೂಲ.
423. ಸಿರಿಬಂದ ಕಾಲಕ್ಕೆ ನಡುರಾತ್ರಿ ಕೊಡೆ ಹಿಡ್ದದೆ.
424. ಒಗ್ಗದ ಹೆಂಣ್‌ಂದ ಮನೆ ಉದ್ದಾರಾದೆ.
425. ಚುಕ್ಕಾಣಿ ಇಲ್ಲದ ದೋಣಿನಂಗೆ.
426. ಲಂಗರ್ ಹಾಕಿದ ಹಡಗ್‌ನಂಗೆ.
427. ಕಾಣದವಂಗೆ ಕನ್ನಡಿ ತೋರ್ಸಿದಂಗೆ.
428. ಹುಟ್ಟಿಟು ಕೊಳ್ಳಿಕುಮಾರ.
429. ಕೈಕೆಸರಾದರೆ ಬಾಯಿ ಮೊಸರು.
430. ತನ್ನ ಮೊರಿ ಹೊನ್ನಮೊರಿ, ಪರರ ಮೊರಿ ಕಾಕಮೊರಿ.
431. ತಬ್ಬಲಿ ಮಕ್ಕ ಕುದ್ದಂಗೆ.
432. ಅರಸಿನ ಕ್ಯಾಲೆವಂಗೆ ಎಲ್ಲದೂ ಅರಸಿನವೇ.

**(ಮುಂದೆನ ಸಂಚಿಕೆಗೆ)** ✍ ಮಾಲಾಗೌ

ಕರ್ನಾಟಕ ಸರ್ಕಾರ

ಸಂಖ್ಯೆ: ಕಸಂವಾ 149 ಕಸಧ 2019 ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 15-10-2019

## ಅಧಿಸೂಚನೆ

ಈ ಕೆಳಕಂಡ ವಿವಿಧ ಅಕಾಡೆಮಿಗಳಿಗೆ/ ಪ್ರಾಧಿಕಾರಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಮುಂಬರುವ ಮೂರು ವರ್ಷಗಳ ಅವಧಿಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಈ ಕೆಳಕಂಡವರನ್ನು ಅಧ್ಯಕ್ಷರು ಮತ್ತು ಸದಸ್ಯರುಗಳನ್ನಾಗಿ ನೇಮಿಸಿ ಆದೇಶಿಸಿದೆ.

### 15. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

1. ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ – ಅಧ್ಯಕ್ಷರು
1. ಶ್ರೀಮತಿ ಜಾನಕಿ ಬೈತಡ್ಕ – ಸದಸ್ಯರು
2. ಶ್ರೀಮತಿ ಸ್ಮಿತಾ ಅಮೃತರಾಜ್ – ಸದಸ್ಯರು
3. ಶ್ರೀಮತಿ ಪ್ರೇಮಾ ರಾಘವಯ್ಯ – ಸದಸ್ಯರು
4. ಶ್ರೀ ಎ.ಪಿ.ಧನಂಜಯ – ಸದಸ್ಯರು
5. ಶ್ರೀ ಆನಂದ ದಂಬೆಕೋಡಿ – ಸದಸ್ಯರು
6. ಶ್ರೀ ಸೂರ್ತಲೆ ಸೋಮಣ್ಣ – ಸದಸ್ಯರು

ಶ್ರೀ ಸೂರ್ತಲೆ ಸೋಮಣ್ಣನವು ತಮ್ಮ ಸದಸ್ಯತನನ ಒಪ್ಪಿತ್ತೆ

# ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ನಾಕನೇ ಸಮಿತಿಯವರ ಪರಿಚಯ

## ಅಧ್ಯಕ್ಷರ್



### ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ

ಶ್ರೀಯುತರ್ ಚಿನ್ನಪ್ಪ ಗೌಡ ಕಜೆಗದ್ದೆ ಮತ್ತೆ ಗಂಗಮ್ಮ ಕಜೆಗದ್ದೆ ಇವರ ಮಂಙ. ಇವ್ ಡಿಪ್ಲೋಮಾ ಇನ್ ಇಲೆಕ್ಟ್ರಿಕಲ್ ಇಂಜಿನೀಯರಿಂಗ್‌ಲಿ ಪದವಿ ಪಡ್ದವ್.

ಕಳ್ದ 20 ವರ್ಷಗಳ್‌ಂದ ಯುವಜನ ಕ್ಷೇತ್ರಲಿ ತೊಡಗಿಸಿಕೊಂಡವ್. ನೆಹರು ಯುವ ಕೇಂದ್ರ ಮಂಗಳೂರು ಕೊಡಮಾಡುವ ಜಿಲ್ಲಾ ಯುವ ಪ್ರಶಸ್ತಿ, ಕರ್ನಾಟಕ ಸರ್ಕಾರ ಕೊಡಮಾಡುವ ರಾಜ್ಯ ಯುವ ಪ್ರಶಸ್ತಿ ಮತ್ತೆ 2013 ರಲ್ಲಿ ರಾಷ್ಟ್ರಪತಿಗಳಾದ ಪ್ರಣವ್ ಮುಖರ್ಜಿ ಇವರ್‌ಂದ ರಾಷ್ಟ್ರೀಯ ಯುವ ಪುರಸ್ಕಾರಕ್ಕೆ ಪಾತ್ರರಾದವ್. 2012–13ರಲಿ ಸುಳ್ಯ ತಾಲೂಕು ಯುವಜನ ಒಕ್ಕೂಟದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿಯೊಳೊ.

ಗ್ರಾಮೀಣ ಪ್ರದೇಶಲಿ ಸಾಹಿತ್ಯ, ಚಲನಚಿತ್ರ, ಚಿತ್ರಕಲಾ ಶಿಬಿರಗ ಅಲ್ಲದೆ ಸಾಂಸ್ಕೃತಿಕ ಕಾರ್ಯಕ್ರಮಗಳ ಸಂಘಟನೆಕಾರರೂ ಹೌದು.

## ರಿಜಿಸ್ಟ್ರಾರ್



### ಶ್ರೀ ಚಿನ್ನಸ್ವಾಮಿ

ಶ್ರೀಯುತ ಚಿನ್ನಸ್ವಾಮಿ ಇವು ಮೂಲತಃ ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಕಲೀಗೌಡನಹಳ್ಳಿ ಪಸಯ್ಯನಪುರ ಗ್ರಾಮದವು.

ಪ್ರಾಥಮಿಕ ಶಿಕ್ಷಣನ ಸ್ವಗ್ರಾಮಲಿ, ಸರ್ಕಾರಿ ಪ್ರೌಢಶಾಲೆ ಹಂಗಳ ಗ್ರಾಮಲಿ ಪೂರ್ಣಗೊಳಿಸಿದೊ. ಪದವಿನ ಮೈಸೂರ್‌ನ ಮಹಾರಾಜ ಕಾಲೇಜು ಮತ್ತೆ ಸಮೂಹ ಸಂವಹನ ಅಲ್ಲದೆ ಪತ್ರಿಕೋದ್ಯಮಲಿ ಸ್ನಾತಕೋತ್ತರ ಪದವಿನ ಮೈಸೂರ್‌ನ ಮಾನಸ ಗಂಗೋತ್ರಿಲಿ ಪಡ್ಕಂಡೊ.

ಕಳ್ದ 2008ರ ಜೂನ್ ತಿಂಗಳ್‌ಂದ ಕೊಡಗು ಜಿಲ್ಲೆಯ ವಾರ್ತಾ ಇಲಾಖೆಲಿ ವಾರ್ತಾ ಸಹಾಯಕರಾಗಿ ಸೇರ್ದ ಇವರ್ನ 2013 ರ ಮಾರ್ಚ್ 31 ರ್‌ಂದ ಹೆಚ್ಚುವರಿ ಪ್ರಭಾರಲಿ ಸಹಾಯಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸ್ತೊಳೊ.

ಮಾನ್ಯ ಜಿಲ್ಲಾಧಿಕಾರಿಗಳ ಕಛೇರಿ ಪತ್ರ ಸಂಖ್ಯೆ:ಸಿಬ್ಬಂದಿ(1) ಸಿಆರ್/2019–20 ದಿನಾಂಕ: 17–12–2019 ರ ಆದೇಶದನ್ವಯ ಡಿಸೆಂಬರ್ 23 ರ್‌ಂದ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ರಿಜಿಸ್ಟ್ರಾರ್(ಪ್ರ)ಆಗಿ ಕಾರ್ಯನಿರ್ವಹಿಸ್ತೊಳೊ.

## ಸದಸ್ಯರ ಪರಿಚಯ

### ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ



ಇವು ಗೃಹಿಣಿಂಯಾಗಿ, ಲೇಖಕಿಂಯಾಗಿ, ಸಾಹಿತಿಯಾಗಿ, ಜನಪದ ಕಲಾವಿದೆಯಾಗಿ ಗೌಡ ಮಹಿಳಾ ಒಕ್ಕೂಟ(ರಿ.), ಮಡಿಕೇರಿ ಕೊಡಗು ಇಲ್ಲಿ 1997 ರ್‌ಂದ ಸಾಂಸ್ಕೃತಿಕ ವಿಭಾಗಲಿ ಸೇವೆ ಸಲ್ಲಿಸಿಯೊಳೊ. ಕೋಲಾಟ ತಂಡಗಳ್ನ ರಾಜ್ಯಮಟ್ಟಕ್ಕೆ ಕಾರ್ಯಕ್ರಮಗಳ ಎತ್ತಿಸಿದವು. ಇವು ಆಕಾಶವಾಣಿ ಮಡಿಕೇರಿ ಇಲ್ಲಿ ಮಹಿಳಾಲೋಕ ಸ್ನೇಹ ಕಾವೇರಿಲಿ ಕನ್ನಡ ಮತ್ತೆ ಅರೆಭಾಷೆಯ 25 ಕ್ಕಿಂತಲೂ ಹೆಚ್ಚಿನ ಕಾರ್ಯಕ್ರಮಗಳ ಕೊಟ್ಟೊಳೊ. ಅರೆಭಾಷೆ ಮತ್ತೆ ಕೊಡವ ಭಾಷೆಯ ಭಕ್ತಿಗೀತೆಗ ಉದರಾಗಲಿ ಪ್ರಸಾರವಾಗುತುಟ್ಟು.

2006 ರ್‌ಲಿ ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಹಸೆಮಣೆ ಕೃತಿಗೆ ಕೊಡಗಿನ ಗೌರಮ್ಮ ದತ್ತಿ ಪ್ರಶಸ್ತಿನ ನೀಡಿ ಸುರೂಗೆ ಗೌರವಿಸಿತ್. 2007ಕ್ಕೆ ಪತ್ರಿಕಾಭವನ ಮಡಿಕೇರಿಯಲ್ಲಿ ಕೊಡಗ್‌ನ ಮುಖ್ಯ ಮಹಿಳಾ ಲೇಖಕಿಯರಲ್ಲಿ ಒಬ್ಬತೇಳಿ ಸನ್ಮಾನಿಸುಟ್ಟು. 2008ರಲ್ಲಿ ಮೈಸೂರು ರಾಜ್ಯೋತ್ಸವ ಗ್ಯಾನಲಿ ನಾಕ್ ಜಿಲ್ಲೆಗಳ ಕವಿಗಳ **ಸಂವಹನ ಕಾವ್ಯ**ಲಿ ಇವರ ಕಾವೇರಿ ಕವನ ಪ್ರಕಟ ಆಗುಟು.

2010ರ್‌ಲಿ ಅಂತರಾಷ್ಟ್ರೀಯ ಮಹಿಳಾ ದಿನಾಚರಣೆ ದಿನ ಜಿಲ್ಲಾ ಶಿಶು ಕಲ್ಯಾಣ ಸಂಸ್ಥೆಂದ **ಜನಪದ ಕಲಾವಿದೆ**ಯಾಗಿ ಸನ್ಮಾನಿತರಾಗೊಳೊ.

2011ರ್‌ಲಿ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ ದಿನ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಿಂದ ಸಾಹಿತ್ಯ ಕ್ಷೇತ್ರಲಿ ಕಿತ್ತೂರು ರಾಣಿ ಚೆನ್ನಮ್ಮ ರಾಜ್ಯ ಪ್ರಶಸ್ತಿನ ಮುಖ್ಯ ಮಂತ್ರಿಯಾಗಿದ್ದ ಯಡಿಯೂರಪ್ಪನವರ್‌ಂದ ಅಂಬೇಡ್ಕರ ಭವನ, ಬೆಂಗಳೂರು ಇಲ್ಲಿ ಪಡ್ದೊ. ಅದೇ ವರ್ಷ ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಕಾವ್ಯಶ್ರೀ ಪ್ರಶಸ್ತಿ, 2011 ಕೊಡಗು ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿನ ಪಡೆದುದಲ್ಲದೆ ಸುವರ್ಣ ಕರ್ನಾಟಕ ಪ್ರಶಸ್ತಿಗೂ ಆಯ್ಕೆಯಾದೊ.

2012ರ್‌ಲಿ ಸರಕಾರಿ ಮಾದರಿ ಶಾಲೆ, ಬೆಟ್ಟಗೇರಿಯ ಶತಮಾನೋತ್ಸವದ ಶತ ಸಂಭ್ರಮ ಸ್ಮರಣ ಸಂಚಿಕೆಗೆ ಸಂಪಾದಕಿಯಾಗಿ ಸೇವೆ. 2012ರ್‌ಲಿ ಕರ್ನಾಟಕ ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿ ಅಕಾಡೆಮಿಗೆ ಸದಸ್ಯೆಯಾಗಿ ಆಯ್ಕೆಯಾದೊ.

2016ರ್‌ಲಿ ಅರೆಭಾಷೆ ಅಕಾಡೆಮಿಯ **ಗೌರವ ಪ್ರಶಸ್ತಿನ ರವೀಂದ್ರ ಕಲಾಕ್ಷೇತ್ರ, ಬೆಂಗಳೂರು** ಇಲ್ಲಿ ಪಡ್ದೊ. 2017ರ್‌ಲಿ ಕರ್ನಾಟಕ ಜಾನಪದ ಪರಿಷತ್ತು ಕೊಡಗು ಜಿಲ್ಲಾ ಘಟಕಂದ ಸನ್ಮಾನಿತರಾದೊ.

2018 ರಲ್ಲಿ ಕರ್ನಾಟಕ ಜಾನಪದ ಪರಿಷತ್ತು, ರಾಮನಗರ ಇಲ್ಲಿಂದ ಶ್ರೀ ಶ್ರೀ

ಶ್ರೀ ನಿರ್ಮಲಾನಂದ ಸ್ವಾಮಿಯವರ್‌ಂದ ಜಾನಪದ ಲೋಕ ಪ್ರಶಸ್ತಿ ಪಡ್ಕಂಡೊಳೊ.

ಹಳೆ ವಸ್ತುಗಳ ಸಂಗ್ರಹ ಜನಪದಲೋಕ ರಾಮನಗರಕ್ಕೆ ಗೌಡ ಮಹಿಳಾ ಒಕ್ಕೂಟಂದ 11 ವಸ್ತುಗಳ ಸಂಗ್ರಹಣೆಲಿ ಶ್ರಮ. 11-02-2018 ಜಾನಪದ ಲೋಕ ಪ್ರಶಸ್ತಿ ರಾಮನಗರ, ಬೆಂಗಳೂರು ಇಲ್ಲಿ ಪಡ್ಡೊ.

<u>ಬರ್ದ ಕೃತಿಗ :</u>

ಜನಪ್ರಿಯ ಸೋಬಾನೆ ಸಂಗ್ರಹ ಹಸೆಮಣೆ ಮೂರು ಮುದ್ರಣ, ಆಚರಣೆಗಳ ಸಂಗ್ರಹ ಅಕ್ಷಯ, ಬೇರ್‌ಲಿ ಚಿಗ್‌ರ್, ಬೆಳ್ಳಿ ಚುಕ್ಕೆಗ ನಾಟಕ ಬಿಡುಗಡೆ ಆಗುಟು. ಜಾನಪದ ರಸಗಂಟು ಜನಪದ ಹಾಡುಗ ಮತ್ತೆ ಐನ್‌ಮನೆವೊಳಗೆ ಮುದ್ರಣದಲ್ಲುಟ್ಟು.

ಪ್ರಸ್ತುತ ಗೌಡ ಮಹಿಳಾ ಒಕ್ಕೂಟ, ಮಡಿಕೇರಿಯ ಉಪಾಧ್ಯಕ್ಷೆಯಾಗಿದ್ದು, ಜಿಲ್ಲಾ ಮಹಿಳಾ ಲೇಖಕಿಯರ ಸಂಘದ ಸದಸ್ಯೆಯಾಗೊಳೊ.

ಕರ್ನಾಟಕ ಮಹಿಳಾ ಲೇಖಕಿಯರ್ಲಿ ಆಯ್ದ ನೂರುಮಂದಿಲಿ ಇವೂ ಒಬ್ಬರಾಗಿದ್ದು, ಸಾಕ್ಷ್ಯಚಿತ್ರ. ವಾರ್ತಾ ಇಲಾಖೆ, ಬೆಂಗಳೂರು ಇವು ಆರ್‌ಸಿದ 12 ಸಾಹಿತಿಗಳ್ಲಿ ದೂರ ದರ್ಶನಲಿ ಜೀವನ ಚರಿತ್ರೆ ಸಾಕ್ಷ್ಯಚಿತ್ರ ಪ್ರಸಾರ ಆಗುಟ್ಟು.

ಪತಿ ಬೆಳ್ಯಪ್ಪನವು ಭಾರತೀಯ ವಾಯುಪಡೆ ಮತ್ತು ಭಾರತೀಯ ಜೀವ ವಿಮಾ ಶಾಖೆಯಲ್ಲಿ ನೌಕರಿಯಲ್ಲಿದ್ದು, ನಿವೃತ್ತಿ ಹೊಂದಿ ಈಗ ಕೃಷಿಕರಾಗೊಳೊ. ಮಡಿಕೇರಿ ತಾಲೋಕು ಪಾಲೂರಿನವರಾದ ಇವ್ಕೆ ಇಬ್ಬರು ಗಂಡು ಮಕ್ಕ, ಮೊಮ್ಮಕ್ಕಳೊಟ್ಟಿಗೆ ಮಡಿಕೇರಿ ನಗರಲಿ ವಾಸವಾಗೊಳೊ.

## ಶ್ರೀಮತಿ ಸ್ಮಿತಾ ಅಮೃತರಾಜ್, ಕುಯಿಂತೋಡು



ಇವು ಹುಟ್ಟಿದ್ ಪಂಜದ ಪಳಂಗಾಯ ಮನೆ. ಗೃಹಿಣಿ ಮತ್ತು ಕೃಷಿಕ ಮಹಿಳೆ. ಕನ್ನಡ ಸಾಹಿತ್ಯಲಿ ಎಂ.ಎ. ಪದವೀಧರೆ. ಓದುದು ಮತ್ತೆ ಬರವಣಿಗೆ ಇವರ ಆಸಕ್ತಿಯ ವಿಷಯಗ. ಎರಡ್ ಕವನ ಸಂಕಲನ, ಒಂದು ಲಲಿತ ಪ್ರಬಂಧ ಸಂಕಲನ ಪ್ರಕಟಣೆ ಆಗುಟು. ಸಾಹಿತ್ಯ ರತ್ನ ಪ್ರಶಸ್ತಿ, ಬಿ.ಎಂ. ಶ್ರೀ ಕಾವ್ಯ ಪ್ರಶಸ್ತಿ, ಕೊಡಗಿನ ಗೌರಮ್ಮ ಪ್ರಶಸ್ತಿ, ರಾರಿದೀಪ ಪ್ರಶಸ್ತಿ, ಮುಂಬಯಿಯ ಸುಶೀಲ ಸೀತಾರಾಮ ಶೆಟ್ಟಿ ಕಾವ್ಯ ಪ್ರಶಸ್ತಿ - ಇವೆಲ್ಲ ಸಾಹಿತ್ಯ ಸೇವೆಗೆ ಸಿಕ್ಕಿದ ಗೌರವಗ. ಪ್ರಸ್ತುತ ಕೊಡಗ್‌ನ ಸಂಪಾಜೆಯ ಚೆಂಬು ಗ್ರಾಮಲಿ ಸಂಸಾರ ನೀಸ್ತೊಳೊ.

# ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ



ಶ್ರೀಮತಿ ಪ್ರೇಮ ರಾಘವಯ್ಯ ಇವು ಬಿ. ಬಾಡಗ ಗ್ರಾಮದ ಕುಟ್ಟನ ಶ್ರೀ ಮಾದಪ್ಪ ಮತ್ತೆ ಜಾನಕಿಯವರ ನಾಕನೇ ಮಗಳು. ಇವು ಅವಂದೂರು ಚೊಕ್ಕಾಡಿ ಶ್ರೀ ರಾಘವಯ್ಯನವರ ಪತ್ನಿ. ಈಗ ಮಡಿಕೇರಿ ಟಿ. ಜಾನ್ ಲೇಔಟ್‌ನ ಶಕ್ತಿ ವಸತಿ ಗೃಹಲಿ ವಾಸವಾಗಿ ಒಳೊ. ಇವು ಹಲವಾರು ಸಂಘ ಸಂಸ್ಥೆಲಿ ಕೆಲಸ ಮಾಡಿಳೊ. ಮೊದುವೆಲಿ ಹೆಣ್ಣ್ ಗಂಡ್ ವಹಿಸಿ ಕೊಡ್ದು ಮಾಡಿವೆ. ಮಡಿಕೇರಿ ಆಕಾಶವಾಣಿಯ ಅರೆಭಾಷೆ ಕಾರ್ಯಕ್ರಮ ಕೊಟ್ಟವೆ. ಅರೆಭಾಷೆ ಕೋಲಾಟಲಿ ಭಾಗವಹಿಸೊಳೊ. ಸುಭೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ ಬಗ್ಗೆ ಲಾವಣಿ ಪದ ಹಾಡಿಕೆ ರಾಜ್ಯ ಮಟ್ಟದವರೆಗೆ ಹೋಗೊಳೊ. ಸೋಬಾನೆ ಸಾಕ್ಷ್ಯಚಿತ್ರಲಿ ಭಾಗಿಯಾಗೊಳೊ. ಅರೆಭಾಷೆ ಕಿರುಚಿತ್ರ 'ನಂಟತಿ ಗೂಡೆ' (ವಿಷ್ಣು ಕ್ರಿಯೆಷನ್) ಲಿ ಅಮ್ಮನ ಪಾತ್ರ ನಿರ್ವಹಿಸಿಯೊಳೊ.

# ಶ್ರೀ ಧನಂಜಯ್ ಅಗೋಳಿಕಜೆ

ಮಡಿಕೇರಿ ತಾಲೂಕು 2ನೇ ಮೊಣ್ಣಂಗೇರಿ ಗ್ರಾಮದ ಪುಟ್ಟಣ್ಣ ಮತ್ತೆ ಧರ್ಮಾವತಿ ಇವರ ಮಂಙ. 1987 ರ ಫೆಬ್ರವರಿ 24ಕ್ಕೆ ಜನನ. ಮದೆನಾಡಿನ ಮದೆ



ಮಹೇಶ್ವರ ಪದವಿ ಪೂರ್ವ ಕಾಲೇಜ್‌ಲಿ ಎಸ್.ಎಸ್.ಎಲ್.ಸಿ. ಮತ್ತೆ ಪಿ.ಯು.ಸಿ. ಮುಗಿಸಿ ಮಡಿಕೇರಿ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜ್‌ಲಿ ಪದವಿ ಪಡ್ದೊ. ರಾಜ್ಯಶಾಸ್ತ್ರ ವಿಷಯಲಿ ಎಂ.ಎ. ಪದವಿ ಪಡ್ಕಂಡೊ. ರಾಷ್ಟ್ರೀಯ ವಿಚಾರ ಮತ್ತು ಸಮಾಜದ ಕೆಲಸಗಳಲ್ಲಿ ಆಸಕ್ತಿ. ವಿದ್ಯಾರ್ಥಿ ದಿನಗಳಲ್ಲಿ ಎ.ಬಿ.ವಿ.ಪಿ. ಸಂಘಟನೆಗಳಲ್ಲಿ ಸಕ್ರೀಯರಾಗಿದ್ದೊ. 2015ರ ಪಂಚಾಯ್ತಿ ಚುನಾವಣೆಗೆ ಗಾಳಿಬೀಡು ಗ್ರಾಮ ಪಂಚಾಯ್ತಿಗೆ 2ನೇ ಮೊಣ್ಣಂಗೇರಿ ಗ್ರಾಮಂದ ಸಾಮಾನ್ಯ ಕ್ಷೇತ್ರಂದ ಊರು ಜನ ಅವಿರೋಧ ಆಗಿ ಆಯ್ಕೆ ಮಾಡ್ದೊ. 2018ರಲ್ಲಿ ಭಾರೀ ಮಳೆಯ ಪ್ರವಾಹಲಿ ಗುಡ್ಡ ಕುಸಿತಲಿ ಗ್ರಾಮಕ್ಕೆ ಕಷ್ಟ ಬಾತ್. ಆಗ ಜನರ ಸಂಕಷ್ಟಕ್ಕೆ ಸ್ಪಂದಿಸಿದಕ್ಕಾಗಿ ಕನ್ನಡದ ಪ್ರತಿಷ್ಠಿತ TV9 ನ್ಯೂಸ್ ಚಾನಲ್‌ನವು ಭವಿಷ್ಯದ 'ಕರುನಾಡ ನಕ್ಷತ್ರ'ತ್ತೇಳುವ ಬಿರುದು ನೀಡಿ ಬೆಂಗಳೂರ್‌ಲಿ ಸನ್ಮಾನ ಮಾಡ್ದೊ. ಹಲವಾರು ಸಂಘ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸ್ತಿದ್ದ್, 2020–2021 ರ ಸಾಲ್‌ಲಿ ಮದೆ ವಿ.ಎಸ್.ಎಸ್.ಎನ್. ಬ್ಯಾಂಕ್‌ನ ಅಧ್ಯಕ್ಷರಾಗಿಯೂ ಆಯ್ಕೆ ಆಗೊಳೊ. ಇವರ ಮೂಲ ಸುಬ್ರಮಣ್ಯ ಹತ್ತಿರದ ಏನೆಕಲ್ಲು ಗ್ರಾಮದ ಕರ್ನಾಜೆಮನೆ.

ಬಾಕಿ : 1. ಪ್ರಸ್ತುತ ಸರಕಾರಿ ಪದವಿ ಪೂರ್ವ ಕಾಲೇಜು, ಮಡಿಕೇರಿ ಇದರ ಕಾಲೇಜು ಅಭಿವೃದ್ಧಿ ಸಮಿತಿಯ ಉಪಾಧ್ಯಕ್ಷ.

2. ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ (ರಿ.) ಯೋಜನೆಯ ಕೊಡಗು ಜಿಲ್ಲಾ ಜನ ಜಾಗೃತಿ ವೇದಿಕೆಯ ಜಿಲ್ಲಾ ಉಪಾಧ್ಯಕ್ಷ.

3. ಮದೆನಾಡ್‌ಲಿ ಸ್ವಾಮಿ ವಿವೇಕಾನಂದ ಯುವ ವೇದಿಕೆಯ ಅಧ್ಯಕ್ಷರಾಗಿ ಪ್ರಸ್ತುತ ಕಾರ್ಯ ನೀಸ್ತೊಳೊ.

## ಶ್ರೀ ದಂಬೆಕೋಡಿ ಸುಬ್ರಾಯ ಆನಂದ್

24 ಮೇ 1946ರ್‌ಲಿ ಚೆಟ್ಟಳ್ಳಿಲಿ, ದಂಬೆಕೋಡಿ ಬೋಪಣ್ಣ ಸುಬ್ರಾಯ ಮತ್ತೆ ಸುಬ್ರಾಯ ರಾಮಕ್ಕ ಇವರ ಮಂಜನಾಗಿ ಹುಟ್ಟಿದೊ. ಶ್ರೀಯುತರ್ ಪ್ರಾಥಮಿಕ, ಪ್ರೌಢ ಶಿಕ್ಷಣನ ಸರ್ಕಾರಿ ಪ್ರೌಢಶಾಲೆ, ಮಡಿಕೇರಿಲಿ ಮಾಡ್ದೊ. ಕಾಲೇಜು ಶಿಕ್ಷಣ ಸೆಂಟ್ ಜೋಸೆಫ್ ಕಾಲೇಜು, ಬೆಂಗಳೂರ್‌ಲಿ ಬಿ.ಕಾಂ., (1964). ಉನ್ನತ ಶಿಕ್ಷಣನ ಚಾರ್ಟೆಡ್ ಅಕೌಂಟೆಟ್ ಆಗಿ 1969 ರ್ ಪಡ್ದೊ.



ಉದ್ಯೋಗ : Asst. Secretary-ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ (1974), ಬೆಂಗಳೂರು. ಇವು ಝೋನಲ್ ಮ್ಯಾನೇಜರ್ (ಡಿಜಿಎಂ), ಮೈಸೂರು, ಹುಬ್ಬಳ್ಳಿ, ಬೆಳಗಾಂ, ಗುಲ್ಬರ್ಗ, ಮಂಗಳೂರ್‌ಲಿ ಸೇವೆ ಮಾಡ್ದೊ. ಇವ್ 2004ರ್‌ಲಿ ಎಕ್ಸಿಕ್ಯೂಟಿವ್ ಡೈರೆಕ್ಟರ್ ಆಗಿ ನಿವೃತ್ತಿಯಾದೊ.

ಸಮಾಜಸೇವೆ : ಕೊಡಗು ಮತ್ತು ದಕ್ಷಿಣ ಕನ್ನಡ ಸಮಾಜ, ಬೆಂಗಳೂರು (1967–71) ಇದರ ಕಾರ್ಯದರ್ಶಿಯಾಗಿ ಸೇವೆ ಮಾಡ್ಯೊಳೊ.

ಅಧ್ಯಕ್ಷರಾಗಿ :* ಕೆಎಸ್‌ಎಫ್‌ಸಿ ಆಫೀಸರ್ಸ್ ಅಸೋಸಿಯೇಶನ್, ಬೆಂಗಳೂರು(1984-88)

* ಕೆಎಸ್‌ಎಫ್‌ಸಿ ಎಂಪ್ಲಾಯರ್ ಹೌಸಿಂಗ್ ಕೋ– ಆಪರೇಟಿವ್ ಸೊಸೈಟಿ, ಬೆಂಗಳೂರು
* ಕೊಡಗು ಗೌಡ ಸಮಾಜ, ಮೈಸೂರು (1988–91)
* ಒಕ್ಕಲಿಗ ಯಾನೆ ಗೌಡ ಸಮಾಜ, ಮಂಗಳೂರು (1992–2004)
* ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರು (1999–2004) ಅಲ್ಲದೆ ಇದೆಲ್ಲದರ ಅಧ್ಯಕ್ಷರಾಗಿ ಸೇವೆ ಮಾಡ್ಯೊಳೊ.
* ಕೊಡಗು ಗೌಡ ವಿದ್ಯಾಸಂಘ, ಮಡಿಕೇರಿ ಇದರ ಉಪಾಧ್ಯಕ್ಷರಾಗಿದ್ದೊ.
* ನಿರ್ದೇಶಕರು, ಕೊಡಗು ಗೌಡ ನಿವೃತ್ತ ನೌಕರರ ಸಂಘ, ಮಡಿಕೇರಿ. (2012)
* ಅಧ್ಯಕ್ಷರು, ಫೆಡರೇಶನ್ ಆಫ್ ಕೊಡಗು ಗೌಡ ಸಮಾಜ, ಮಡಿಕೇರಿ (2016–17),
* ನಿರ್ದೇಶಕರು, ಕೊಡಗು ಗೌಡ ಸಮಾಜ, ಮಡಿಕೇರಿ (2015–
* ಅಧ್ಯಕ್ಷರು, ಶ್ರೀಮಂಗಲ ಕಂಪನಿ ಕಲ್ಚರಲ್ ಅಸೋಸಿಯೇಶನ್, ಚೆಟ್ಟಳ್ಳಿ ಇಲ್ಲೆಲ್ಲಾ ತಮ್ಮ ಸೇವೆನ ಮಾಡ್ಯೊಳೊ.

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

## ಅಧ್ಯಕ್ಷರ ಮತ್ತು ಸದಸ್ಯರ ವಿಳಾಸ :

ಅಧ್ಯಕ್ಷರು

**ಶ್ರೀ ಲಕ್ಷ್ಮೀ ನಾರಾಯಣ**

ಕನಕಮಜಲು ಅಂಚೆ, ಸುಳ್ಯ ತಾಲೂಕು, ದ.ಕ 574223

ಮೊ ನಂ 9449082249, kajegadde@gmail.com

ರಿಜಿಸ್ಟ್ರಾರ್

**ಶ್ರೀ ಚಿನ್ನಸ್ವಾಮಿ**

ಪಸಯ್ಯನಪುರ ಗ್ರಾಮ,

ಕಲೀಗೌಡನಹಳ್ಳಿ, ಗುಂಡ್ಲುಪೇಟೆ ತಾಲ್ಲೂಕು

ಚಾಮರಾಜನಗರ ಜಿಲ್ಲೆ

ಮೊ: 9945045327

ಅರ್ಥ ಸದಸ್ಯರು

**ಶ್ರೀಮತಿ ಕೆ.ಟಿ.ದರ್ಶನ**

ಸಹಾಯಕ ನಿರ್ದೇಶಕರು

ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಕೊಡಗು ಜಿಲ್ಲೆ, ಮಡಿಕೇರಿ

ಮೊ: 9483110593

ಸದಸ್ಯರು

| | |
|---|---|
| **ಶ್ರೀಮತಿ ಜಾನಕಿ ಬೈತಡ್ಕ** | #21–16. ರೇಸ್‌ಕೋರ್ಸ್ ರಸ್ತೆ,<br>ಎಲ್‌ಐಸಿ ಹತ್ತಿರ,ಮಡಿಕೇರಿ, ಕೊಡಗು.<br>ಮೊ ನಂ 9008571899 |
| **ಶ್ರೀಮತಿ ಸ್ಮಿತಾ ಅಮೃತರಾಜ್** | "ಹಸಿರು" ಬಾಲೆಂಬಿ ಅಂಚೆ ಚೆಂಬು ಗ್ರಾಮ<br>ಮಡಿಕೇರಿ ತಾಲೂಕು<br>ಮೊ ನಂ 9980402968 |
| **ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ** | ಟಿ.ಜಾನ್ ಲೇಔಟ್, ಶಕ್ತಿ ಕ್ವಾಟ್ರಸ್,<br>ಮಡಿಕೇರಿ, ಮೊ.ನಂ 9900992360 |
| **ಶ್ರೀ ಎ.ಪಿ.ಧನಂಜಯ ಅಗೋಳಿಕಜೆ** | 2ನೇ ಮೊಣ್ಣಂಗೇರಿ ಗ್ರಾಮ<br>ಮದೆ ಅಂಚೆ, ಮಡಿಕೇರಿ ತಾಲೂಕು<br>ಮೊ ನಂ 9449731238 |
| **ಶ್ರೀ ಆನಂದ ದಂಬೆಕೋಡಿ** | ಮೇಘಸಂಧ್ಯೆ ಎಸ್ಟೇಟ್, ಕತ್ತಲೆಕಾಡು ಗ್ರಾಮ,<br>ಕಡಗದಾಳು ಅಂಚೆ, ಮಡಿಕೇರಿ ತಾಲೂಕು<br>ಮೊ ನಂ 9448141502 |

## ಲೇಖಕರ ಹೆಸ್ರ್ ಮತ್ತ್ ವಿಳಾಸ :

| | |
|---|---|
| ಪಿ.ಜಿ. ಅಂಬೆಕಲ್ | ನಂ: 203, ವಿಶ್ವಾಸ್ ಡ್ಯಾಫೋಡಿಲ್ಸ್, ರಾಮಚಂದ್ರಪುರ, ಜಾಲಹಳ್ಳಿ ಪೋಸ್ಟ್, ಬೆಂಗಳೂರು – 560013 |
| ವಿಶ್ವನಾಥ್ | ಎಡಿಕೇರಿ. |
| ಕುತ್ಯಾಳ ನಾಗಪ್ಪ ಗೌಡ (ಕಿರಣ) | (ಮೂಲ : ಪುರಂದರದಾಸರ ಹಾಡು) ಕಿರಣ ಕುಟೀರ, ಸುಳ್ಯ (ದಕ) 574239 9448297221, 7618753221 kngkirana@gamil.com |
| ಲೀಲಾ ದಾಮೋದರ | "ಧಾತ್ರಿ", ವಲಯ ಅರಣ್ಯ ಕಚೇರಿ ಹತ್ತಿರ, ಗಾಂಧಿನಗರ ಸುಳ್ಯ – 574239 |
| ತೆಕ್ಕಡ ಬಿ. ಕುಮಾರ ಸ್ವಾಮಿ | ಮುತ್ತಾರ್ಮುಡಿ ಗ್ರಾಮ, ಮೂರ್ನಾಡ್ ಅಂಚೆ, ಮೊ : 9483234335, 6360875378 |
| ಕಾರ್ತಿ ಪದೇಲ | |
| ಅಪೂರ್ವ ಕೊಲ್ಯ | |
| ವಂದನಾ ಜಿ. | D/o. ರಾಮಣ್ಣ ಗೌಡ ಗುಂಡಡ್ಕ ಮನೆ, ಪಂಜ. |
| ಮಾಧವ ಗೌಡ ಮಡಪ್ಪಾಡಿ | ಶ್ರೀ ಕೃಪಾ ನಿಲಯ, ಮಡಪ್ಪಾಡಿ ಕಾಂಪೌಂಡ್, ಶ್ರೀ ಚೆನ್ನಕೇಶವ ದೇವಸ್ಥಾನದ ಬಳಿ, ದೇವಸ್ಯ, ಸುಳ್ಯ – 574239, ದ.ಕ. ಮೊ : 8197435477 |
| ಕುಯಿಂತೋಡು ದಾಮೋದರ | ಚೆಂಬು ಗ್ರಾಮ, ಬಾಲೆಂಬಿ ಅಂಚೆ – 5274234, ಮಡಿಕೇರಿ ತಾಲೂಕು, ಕೊಡಗು, ಮೊ : 9901315963 |

| | |
|---|---|
| **ಕಟ್ರತನ ಲಲಿತಾ ಅಯ್ಯಣ್ಣ** | 'ಅನುಗ್ರಹ', ಗೌಳಿಬೀದಿ,<br>ಮಡಿಕೇರಿ, ಮೊ : 7204675925 |
| **ಕಣಜಾಲ್ ಪೂವಯ್ಯ** | ಚೆಟ್ಟಳ್ಳಿ.<br>ಫೋನ್ : 08276–267830<br>ಮೊ :8762346750 |
| **ಕೊಟ್ಟಕೇರಿಯನ ಲೀಲಾ ದಯಾನಂದ** | SDE, BSNL, ಮಡಿಕೇರಿ |
| **ಕಟ್ರತನ ಕೆ. ಬೆಳ್ಯಪ್ಪ** | ನಿವೃತ್ತ ಶಿಕ್ಷಕ, ಬಲಮುರಿ ಗ್ರಾಮ,<br>ಮೊ : 8197063328 |
| **ಉಳುವಾರನ ರೋಶನ್ ವಸಂತ್** | ಕಾಂತೂರು–ಮೂರ್ನಾಡು. |
| **ಎ.ಕೆ. ಹಿಮಕರ** | ಬಂಟಮಲೆ. |
| **ಎಂ.ಜಿ. ಕಾವೇರಮ್ಮ** | "ನಿಸರ್ಗ" ಮಾವಜಿ,<br>ಸುಳ್ಯ ದ.ಕ. |
| **ಕಾಳೆಯಂಡ ತಂಗಮ್ಮ ಅಪ್ಪಚ್ಚ** | ಬಿಳಿಗೇರಿ ಗ್ರಾಮ,<br>ಮೊ: 9483008653 |
| **ಉದಯಕುಮಾರಿ ಚೆಂಬು** | 9632900436 |
| **ಡಾ. ಪುನೀತ್ ರಾಘವೇಂದ್ರ** | **ಕುಂಟುಕಾಡು**<br>BNYS, MD Yoga |
| **ಸಂಗೀತ ರವಿರಾಜ್** | ಬಾಲಂಬಿ ಅಂಚೆ, ಚೆಂಬು ಗ್ರಾಮ,<br>ಮಡಿಕೇರಿ ತಾಲ್ಲುಕು,ಕೊಡಗು–57424 |
| **ಎನ್.ಎಸ್. ಕವಿತ** | ಗುಡ್ಲೂರು ಗ್ರಾಮ, ಮಾಲ್ದಾರೆ ಅಂಚೆ,<br>ವಿರಾಜಪೇಟೆ ತಾಲ್ಲೂಕು, ದ.ಕೊಡಗು, |
| **ಕುಲ್ಲಚನ ಕಾರ್ಯಪ್ಪ ಮಾಲಾಗೌ** | ಕುಂಬಳದಾಳು |

